# University of Mysore

## ENTRANCE EXAMINATION

# Selections in Kannada Poetry

FOR

## 1922







MYSORE

[illegible]D AT THE GOVERNMENT BRANCH PRESS

1921



# ಪೀಠಿಕೆ.

---

## I ಚೆನ್ನಬಸವೇಶ್ವರಪುರಾಣ

ಈ ಗ್ರಂಥವು ವಾರ್ಧಕಷಟ್ಪದಿಯಲ್ಲಿ ರಚಿತವಾಗಿರುವುದು. ಇದರಲ್ಲಿ ಸುಮಾರು ೬೯೦೦ ಪದ್ಯಗಳಿರುತ್ತವೆ. ಬಸವೇಶ್ವರನ ಸೋದರದ ಅಳಿಯನಾದ ಚೆನ್ನಬಸವಣ್ಣನ ಚರಿತ್ರೆಯು ಇದರಲ್ಲಿ ವರ್ಣಿತವಾಗಿದೆ. ಸಂದರ್ಭಾನುಸಾರವಾಗಿ ಅಷ್ಟಾದಶವರ್ಣನೆಗಳೂ, ಶಿವಪಂಚವಿಂಶತಿ ಲೀಲೆಗಳೇ ಮೊದಲಾದ ಪೌರಾಣಿಕ ಕಥೆಗಳೂ, ವೀರಶೈವಮತಪ್ರಕ್ರಿಯೆಗಳೂ, ಪುರಾತನರಪ್ರಸಕ್ತಿಯೂ ಅಲ್ಲಲ್ಲಿ ಕಂಡುಬರುವುವು. ಬಸವೇಶ್ವರನು ನಂದೀಶ್ವರನ ಅವತಾರವೆಂದೂ, ಚೆನ್ನಬಸವೇಶ್ವರನು ಸಾಕ್ಷಾತ್ ಪರಶಿವನ ಅವತಾರವೆಂದೂ ವೀರಶೈವರಲ್ಲಿ ನಂಬಿಕೆ ಇರುವುದರಿಂದ, ಚೆನ್ನಬಸವೇಶ್ವರಪುರಾಣವನ್ನು ಬಹಳ ಪವಿತ್ರವೂ ಉತ್ಕೃಷ್ಟವೂ ಆದ ಗ್ರಂಥವೆಂದು ವೀರಶೈವರು ಭಾವಿಸಿರುವರು. ಈ ಗ್ರಂಥದ ಐದನೆಯ ಕಾಂಡದ ೯ನೆಯ ಸಂಧಿಯಲ್ಲಿ ಕೊಟ್ಟಿರುವಕಾಲಜ್ಞಾನದಲ್ಲಿ ಅನೇಕ ಚರಿತ್ರಾಂಶಗಳು ಕಂಡುಬರುವುವು. ಕನ್ನಡಭಾಷೆಯಲ್ಲಿರುವ ಷಟ್ಪದೀಗ್ರಂಥಗಳಲ್ಲಿ ಇದೊಂದು ಉತ್ತಮವಾದ ಗ್ರಂಥವಾಗಿರುವುದು. ಒಟ್ಟಿನಲ್ಲಿ ಕನ್ನಡಿಗರಿಗೆ ಬಹಳ ಪ್ರೀತಿಪಾತ್ರವಾಗಿರುವ ಗ್ರಂಥಗಳಲ್ಲಿ ಚೆನ್ನಬಸವೇಶ್ವರಪುರಾಣವು ಒಂದೆಂದು ಧಾರಾಳವಾಗಿ ಹೇಳಬಹುದು.

ಈ ಗ್ರಂಥಕರ್ತನ ಹೆಸರು ವಿರೂಪಾಕ್ಷಪಂಡಿತಾರಾಧ್ಯ. ಈತನು ತನ್ನ ಗ್ರಂಥವನ್ನು "ಶಾಲಿವಾಹನ ಶಕದ ಸಾಹಸ್ರದೈನೂರವೇಲದೇಳನೆಯ ತಾರಣ ಸುಸಂವತ್ಸರದ ಕಾಲದೊಳಗೆ" ಅಂದರೆ ಕ್ರಿಸ್ತಶಕ ೧೫೮೪-೮೫ರಲ್ಲಿ ಬರೆದನು. ಈತನು ವಿಜಯನಗರದ ಹಿರಿಯಮಠದ ಗುರುವಾಗಿದ್ದನು. ಮಳೆಯಮಲ್ಲೇಶನೆಂದು ಪ್ರಸಿದ್ಧನಾದ ವೀರಶೈವ ಗುರುವಿನ ವಂಶೋದ್ಭವನಾದ ಸಿದ್ಧವೀರೇಶನು ಈ ಗ್ರಂಥಕರ್ತನ ಗುರು,

ಕವಿಯು ಪ್ರಸಿದ್ಧರಾದ ಪುರಾತನ ಕರ್ಣಾಟಕವೀರಶೈವಕಾವ್ಯಕರ್ತ ರಲ್ಲಿ ಹರೀಶ್ವರ (ಸು. ೧೧೬೫), ರಾಘವಾಂಕ (ಸು. ೧೧೬೫);, ಕೆರೆಯ ಪದ್ಮರಸ (ಸು. ೧೧೬೫), ಪಾಲ್ಕುರಿಕೆಯ ಸೋಮಾರಾಧ್ಯ (ಸು. ೧೧೯೫), ಭೀಮರಸ (ಸು. ೧೩೭೯), ಚಾಮರಸ (ಸು. ೧೪೩೦,) ಮಗ್ಗೆಯ ಮಾಯಿದೇವ (ಸು. ೧೪೩೦)-ಈ ಕವಿಗಳನ್ನು ಸ್ಮರಿಸಿರುವನು. ತನ್ನನ್ನು "ಸರಸಕರ್ಣಾಟಭಾಷಾವಿಶಾರದಂ," "ವರಕವಿಪ್ರಕರ ಮಾನಸರಾಜಹಂಸಂ," "ಅಸುಹೃತ್ಕವಿಸ್ರತತಿವಾರ್ಧಿವಡಬಂ" ಎಂದೂ ಈ ಗ್ರಂಥವನ್ನು "ವರ್ಣಕಕ್ಕಿಲ್ಲಲಕ್ಷಣವೆಂಬ ಜನರ ನಾಳ್ನುಡಿಯ ನಲ್ಲೆನಿಸಿಪೇಳ್ದಂ" (I. ೧. ೨೮) ಎಂದೂ ಹೇಳಿಕೊಂಡಿರುವನು. ಈತನು ಹೇಳಿಕೊಂಡಿರುವುದಕ್ಕೆ ತಕ್ಕಂತೆಯೇ ವೀರಶೈವಕವಿಗಳ ಇತರ ಅನೇಕ ಷಟ್ಪದೀಗ್ರಂಥಗಳಿಗಿಂತಲೂ, ಚೆನ್ನಬಸವೇಶ್ವರಪುರಾಣವು ತಕ್ಕ ಮಟ್ಟಿಗೆ ಲಕ್ಷಣಬದ್ಧವಾಗಿದೆ. ಈ ಗ್ರಂಥದ ಪ್ರತಿಯೊಂದು ಸಂಧಿಯ ಪ್ರಾರಂಭದಲ್ಲೂ ಸೂಚನೆಯ ಪದ್ಯಾರ್ಧವಾದಬಳಿಕ ಶಿವಸ್ತುತಿರೂಪ ವಾದ ಒಂದು ಪದ್ಯವೂ, ಪ್ರತಿಯೊಂದು ಸಂಧಿಯ ಅಂತ್ಯದಲ್ಲೂ "ಇಂತೆ ಸಿವ ಚೆನ್ನಬಸವೇಶ್ವರಪುರಾಣನುಂ ............ ಕಂತುಹರನಪರಾವತಾರ ನೆನಿಸುವ ಚೆನ್ನಬಸವೇಶನಳ್ಕರಿಂದಂ" ಎಂಬ ಪದ್ಯವೂ ಇರುವುವು.

ಈ ಕಾವ್ಯದಲ್ಲಿ ಸ್ವಾರಸ್ಯವಾದ ಅನೇಕ ಪದ್ಯಗಳಿರುತ್ತವೆ. ಆದರೆ ಜೈಮಿನೀಭಾರತದಲ್ಲಿರುವಷ್ಟು ಹೆಚ್ಚಾಗಿ ಸ್ವಾರಸ್ಯವಾದ ಪದ್ಯಗಳು ಚೆನ್ನಬಸವೇಶ್ವರಪುರಾಣದಲ್ಲಿ ಕಂಡುಬರುವುದಿಲ್ಲ. ಜೈಮಿನೀಭಾರತ ದಲ್ಲಿರುವ ೯೯೦೭ ಶ್ಲೋಕಗಳಲ್ಲಿ ಅದೇಗ್ರಂಥದ ಏಳನೆಯ ಸಂಧಿಯ ೧೮-೯ನೆಯ ಪದ್ಯಗಳಂತಹ ಸಾಮಾನ್ಯತರದ ಪದ್ಯಗಳು ಹತ್ತಾರು ಸಿಕ್ಕುವುದೂ ಬಹಳ ಪ್ರಯಾಸವಾಗಿರುವಲ್ಲಿ ಚೆನ್ನಬಸವೇಶ್ವರ ಪುರಾಣ ದಲ್ಲಿ ಅಷ್ಟು ಮನೋಜ್ಞವಾದ ಅರ್ಥಸ್ವಾರಸ್ಯವಾಗಲೀ ಪದವೈಚಿತ್ರ್ಯವಾ ಗಲೀ ಕಂಡುಬಾರದಿರುವ ಪದ್ಯಗಳು ನೂರಾರು ಸಿಕ್ಕುವುವು. ಪದಲಾಲಿತ್ಯದ ವಿಷಯದಲ್ಲಂತೂ ಜೈಮಿನಿಭಾರತವು ಚೆನ್ನಬಸವೇಶ್ವರ ಪುರಾಣಕ್ಕಿಂತಲೂ, ಅಷ್ಟೇಕೆ ಇತರ ಎಲ್ಲಾ ಷಟ್ಪದೀ ಗ್ರಂಥಗಳಿಗಿಂ ತಲೂ ಅತ್ಯುತ್ಕೃಷ್ಟವಾಗಿರುತ್ತದೆಂದು ಹೇಳಬಹುದಾಗಿದೆ.

ಚೆನ್ನಬಸವೇಶ್ವರಪುರಾಣಕ್ಕೂ ಜೈಮಿನಿ ಭಾರತಕ್ಕೂ ಕೆಲವು ಸಾಮ್ಯಗಳು ಕಂಡುಬರುವುವು. ಚೆನ್ನಬಸವೇಶ್ವರಪುರಾಣದ ಮೊದಲನೆಯಕಾಂಡದ ಎರಡನೆಯ ಶ್ಲೋಕವೂ, ಜೈಮಿನಿಭಾರತದ ಮೊದಲನೆಯ ಸಂಧಿಯ ಮೊದಲನೆಯ ಶ್ಲೋಕವೂ ಒಂದೇರೀತಿಯಾಗಿವೆ. ಇದೂ ಅಲ್ಲದೆ ಪುರವರ್ಣನೆ ಉದ್ಯಾನವರ್ಣನೆ ಇವೇ ಮುಂತಾದ ವಿಷಯಗಳಲ್ಲಿಯೂ ಈ ಎರಡುಗ್ರಂಥಗಳಿಗೆ ಅನೇಕ ಹೋಲಿಕೆಗಳು ಕಂಡುಬರುವುವು. ಶೃಂಗಾರರಸವನ್ನು ವರ್ಣಿಸುವ ಅನೇಕ ಪದ್ಯಗಳಲ್ಲಂತೂ ಭಾವಗಳೂ, ಪದ್ಯರಚನಾಕ್ರಮವೂ ಈ ಎರಡುಗ್ರಂಥಗಳಲ್ಲೂ ಒಂದೇವಿಧವಾಗಿರುವುವು ಹೀಗೆ ಎರಡು ಗ್ರಂಥಗಳಲ್ಲಿಯೂ ಅನೇಕ ಪದ್ಯಗಳ ಅಭಿಪ್ರಾಯಗಳಿಗಿರತಕ್ಕ ಸಾಮ್ಯವನ್ನೂ ಕೆಲವು ಕಡೆಗಳಲ್ಲಿ ಈ ಪದ್ಯಗಳ ಆನುಪೂರ್ವಿಯನ್ನೂ ಪರಿಶೀಲಿಸಿದರೆ * ಈ ಇಬ್ಬರು ಕವಿಗಳಲ್ಲಿ ಯಾರಾದರೂ ಒಬ್ಬರ. ಗ್ರಂಥವನ್ನು ಮತ್ತೊಬ್ಬರು ನೋಡಿಕೊಂಡು ತಮ್ಮ ಗ್ರಂಥವನ್ನು ರಚಿಸಿರಲಾರರೇ ಎಂಬ ಪ್ರಬಲವಾದ ಸಂಶಯವು ತಲೆದೋರುವುದು. ಹೀಗೆ ನೋಡಿದ್ದಪಕ್ಷದಲ್ಲಿ ಯಾರು ಇನ್ನೊಬ್ಬರ ಗ್ರಂಥವನ್ನು ನೋಡಿದ್ದರೆಂಬ ವಿಷಯವಾಗಿ ಬಹಳ ಚರ್ಚೆಗೆ ಅವಕಾಶವಿರುವುದು. ಕರ್ಣಾಟಕಕವಿಚರಿತ್ರೆಯನ್ನು ಬರೆದ ರಾವ್ ಬಹದ್ದೂರ್ ಪ್ರಾಕ್ತನವಿಮರ್ಶವಿಚಕ್ಷಣರಾದ ಮ॥ ರಾ॥ ಆರ್. ನರಸಿಂಹಾಚಾರ್ ಎಂ. ಎ ಯವರು ಕ್ರಿ. ಶ.

---

| ಚೆನ್ನಬವೇಶ್ವರ ಪುರಾಣ | ಜೈಮಿನಿಭರತ |
|---|---|
| I. ೬. ೩೯—೪೪ | II ೫. ೧೦ |
| I. ೮. ೧೬—೨೪ | XXVI. ೧೨, ೧೬ |
| I. ೧೦. ೪, ೩೪, ೪೪, ೪೫ | VI ೧೬; ೨೨, ೨೫, ೨೯ |
| ,, ,, ೪೬, ೪೭, ೪೮, ೪೯ | ,, ,, ೩೦, ೩೧, ೨೬, ೨೭ |
| ,, ,, ೫೦, ೫೧, ೫೬ | ,, ,, ೧೭, ೩೫, ೩೩ |
| ,, ,, ೬೮ | XXVI ೧೨. |
| I. ೧೧ ೬, ೧೫, ೨೫, ೨೪ | III ೪, ೧೨, ೨೩, ೨೮. |

* ಅನುಕ್ರಮವಾಗಿ ಈ ಭಾಗಗಳನ್ನು ಹೋಲಿಸಿನೋಡಬಹುದು. ಹೀಗೆಯೇ ಮತ್ತೆ ಕೆಲವು ಸಾಮ್ಯಗಳೂ ಸಿಕ್ಕುವುವು.

ಸು. ೧೫೦೦ರಲ್ಲಿ ಲಕ್ಷ್ಮೀಶನು ಜೀವಿಸಿದ್ದಿರಬಹುದೆಂದು ಊಹಿಸಿರುತ್ತಾರೆ. ಒಂದುವೇಳೆ ಈ ಊಹೆಯು ವಾಸ್ತವವಾದ ಪಕ್ಷದಲ್ಲಿ ಲಕ್ಷ್ಮೀಶನೇ ಚೆನ್ನಬಸವೇಶ್ವರ ಪುರಾಣದ ಭಾವಗಳಿಗೆ ಮನಸೋತಿದಾನೆ ಎಂದು ಸ್ಪಷ್ಟವಾಗುವುದು. ಆದರೆ ಮೇಲಿನ ಊಹೆಗೆ ಅಷ್ಟು ಪ್ರಬಲವಾದ ಆಧಾರಗಳಿರುವಂತೆ ತೋರುವುದಿಲ್ಲ. ಮಿ॥ ರೈಸ್ ಸಾಹೇಬರಿಗೆ ದೇವನೂರಿನಲ್ಲಿ ದೊರೆತ ಜೈಮಿನೀ ಭಾರತದ ಒಂದು ಪ್ರತಿಯಲ್ಲಿ ಅದು ಕ್ರಿ. ಶ. ೧೪೧೫ರಲ್ಲಿ ಲಿಖಿತವಾಯಿತೆಂದು ಹೇಳತ್ತೆಂದೂ, ಆದರೆ ಅದು ನಂಬಿಕೆಗೆ ಅರ್ಹವಲ್ಲವೆಂದೂ, ಅದಕ್ಕೆ ಮೂರು ಶತಮಾನಗಳ ಈಚೆಗೆ ಜೈಮಿನಿ ಭಾರತವು ಹುಟ್ಟಿರಬಹುದೆಂದೂ ಮಿ॥ ರೈಸ್ ಅವರು ಊಹಿಸಿರುವುದು ಯುಕ್ತಿಯುಕ್ತವಾಗಿರುವುದಿಲ್ಲ. ಆದಕಾರಣ ಜೈಮಿನೀಭಾರತವು ಒಂದುವೇಳೆ ಕ್ರಿ. ಶ. ೧೪೧೫ಕ್ಕೆ ಹಿಂದೆ ಹುಟ್ಟಿದ್ದರೂ ಹುಟ್ಟಿರಬಹುದು. ಈ ಊಹೆಗೆ ಉಪಷ್ಟಂಭಕವಾಗಿ ಸ್ಥಳೈತಿಹ್ಯವೂ ಸಹ, ಲಕ್ಷ್ಮೀಶನ ಕಾಲದಿಂದ ಈಚೆಗೆ ಸುಮಾರು ೧೫ ತಲೆಗಳಷ್ಟು ಕಾಲವು ಗತಿಸಿಹೋಗಿದೆಯೆಂದು ತಿಳಿಸುವುದು. ಒಂದೊಂದು ತಲೆಗೆ ಸುಮಾರು ಮೂವತ್ತು ವರುಷಗಳನ್ನು ಕಟ್ಟಿಕೊಂಡರೂ ಜೈಮಿನೀಭಾರತವು ಹುಟ್ಟಿ ಸುಮಾರು ೪೫೦ ವರ್ಷಗಳಾಗಿರುವುದು ಎಂದು ತೋರುವುದು. ಇದೂಅಲ್ಲದೆ ಚೆನ್ನಬಸವಪುರಾಣ, ಜೈಮಿನೀಭಾರತಗಳ ಪದಸಾಮಗ್ರಿಗಳನ್ನು ನೋಡಿದರೆ ಜೈಮಿನೀ ಭಾರತದಲ್ಲಿಯೇ ಹಳಗನ್ನಡ ಶಬ್ದಗಳ ಪ್ರಾಚುರ್ಯವು ಹೆಚ್ಚಾಗಿರುವಂತೆ ಕಂಡುಬರುವುದು. ಈಕಾರಣಗಳಿಂದ ಚೆನ್ನಬಸವೇಶ್ವರ ಪುರಾಣಕ್ಕಿಂತಲೂ ಜೈಮಿನೀ ಭಾರತವೇ ಪ್ರಾಚೀನವೆಂದು ತೋರುವುದು. ಹೀಗಿರುವಲ್ಲಿ ಈಚಿನವನು ತನಗಿಂತಲೂ ಹಿಂದೆ ಹುಟ್ಟಿದ್ದ ಗ್ರಂಥವನ್ನು ನೋಡಿಕೊಂಡು ಬರೆದನೆಂದು ಹೇಳುವುದೇ ಸಹಜವಾಗಿದೆ. ಪದಲಾಲಿತ್ಯದ ವಿಷಯದಲ್ಲಿಯಾಗಲಿ ಕಷ್ಟಾಕ್ಷರಪ್ರಾಸಗಳ ವಿಷಯದಲ್ಲೇಆಗಲಿ ಅರ್ಥ ಗಾಂಭೀರ್ಯ ವಾಗ್ಗುಂಫನಗಳ ವಿಚಾರದಲ್ಲೇ ಆಗಲಿ, ಲಕ್ಷಣಬದ್ಧತೆಯ ವಿಷಯದಲ್ಲೇ ಆಗಲಿ ಒಟ್ಟಿನಲ್ಲಿ ಚೆನ್ನಬಸವೇಶ್ವರ ಪುರಾಣಕ್ಕಿಂತಲೂ ಜೈಮಿನೀ ಭಾರತವು ಕೆಳಗೈಯಿನದೆಂದು ಸಾಧಿಸುವುದು ಸಾಹಸವೆಂದೇ ಹೇಳಬೇಕು. ಹೀಗಿರುವಲ್ಲಿ ಲಕ್ಷ್ಮೀಶ

ನಂತಹ ಕವಿಯು ಮತ್ತೊಬ್ಬ ಕವಿಯ ಕವಿತ್ವಕ್ಕೆ ಆಸೆಪಟ್ಟಿರುವುದು ಅಸಂಭವ.

ಈ ವಿಷಯವು ಹೇಗೇ ಇದ್ದರೂ ಚೆನ್ನಬಸವೇಶ್ವರಪುರಾಣದಲ್ಲಿ ಅನೇಕ ಸ್ವಾರಸ್ಯವಾದ ಭಾಗಗಳು ಕಂಡು ಬರುವುವು. ಆದರೆ ದುರದೃಷ್ಟವಶದಿಂದ, ಅಚ್ಚಾಗಿರುವ ಈ ಗ್ರಂಥದ ಪ್ರತಿಗಳಲ್ಲಿ ಅನೇಕ ಅಶುದ್ಧಗಳು ಕಾಲುಹಾಕಿಕೊಂಡಿವೆ. ಮಂಗಳೂರಿನಲ್ಲಿ ೧೮೫೭ರಲ್ಲಿ ಮುದ್ರಿತವಾದ ಶಿಲಾಲೇಖದ ಪ್ರತಿಗಳೂ, ೧೮೭೬ರಲ್ಲಿವಿಚಾರದರ್ಪಣ ಮುದ್ರಾಶಾಲೆಯಿಂದ ಪ್ರಕಟವಾದ ಪ್ರತಿಗಳೂ ಸ್ವಲ್ಪಮಟ್ಟಿಗೆ ಶುದ್ಧವಾಗಿವೆ. ಕರ್ಣಾಟಕಭಾಷಾಭಿಮಾನಿಗಳು ಈ ಗ್ರಂಥದ ಎರಡು ಮೂರು ನಾಲ್ಕನೆಯ ಕಾಂಡಗಳಲ್ಲಿ ಕೆಲಕೆಲವು ಭಾಗಗಳನ್ನು ವಿರಾಮ ಕಾಲದಲ್ಲಿ ಓದಿ ಆನಂದಪಡಬಹುದಾಗಿದೆ.



## II ಶ್ರೀರಾಮಾಭ್ಯುದಯ ಕಥಾಕುಸುಮಮಂಜರಿ.

ಈಗ್ರಂಥವನ್ನು ೧೮೮೭ನೆಯ ಇಸವಿಯಲ್ಲಿ ಪ್ರಕಟಿಸಿದ ಮ|| ರಾ|| ಕುಮಾಂಡೂರು ರಾಮಸ್ವಾಮಿಯ್ಯಂಗಾರ್ಯರು, ಇದಕ್ಕೆ "ಆನಂದರಾಮಾಯಣ" ವೆಂದು ನಾಮಾಂತರವನ್ನು ಕೊಟ್ಟಿರುವರು. ಈ ಗ್ರಂಥಕ್ಕೂ ಸಂಸ್ಕೃತದಲ್ಲಿರುವ ಆನಂದರಾಮಾಯಣಕ್ಕೂ ಸಂಬಂಧ ವಿರುವುದಿಲ್ಲ. ಇದೂ ಅಲ್ಲದೆ ಕವಿಯು ಈ ಗ್ರಂಥವನ್ನು ಕುರಿತು "ರಾಮ (ನ) ಕಥಾಮಂಜರಿ," ಎಂದೂ (I. ೧. ೧೪) "ರಾಮ ಚರಿತ್ರ" (I. ೧. ೧೬) ಎಂದೂ "ರಾಮಾಭ್ಯುದಯಕಾವ್ಯ" (VII ೬. ೪೦) ಎಂದೂ ಹೇಳಿಕೊಂಡಿರುವನು. ಪ್ರತಿಕಾಂಡದ ಅಂತ್ಯದಲ್ಲಿಯೂ "ರಾಮಾಭ್ಯುದಯಕಥಾಕುಸುಮಮಂಜರಿ" ಎಂದು ಹೇಳಿಕೊಂಡಿರುವನೇಹೊರತು "ಆನಂದರಾಮಾಯಣ" ವೆಂಬ ಹೆಸರನ್ನು ಎಲ್ಲಿಯೂ ಎತ್ತಿರುವುದಿಲ್ಲ.

ಶ್ರೀರಾಮಾಭ್ಯುದಯಕಥಾಕುಸುಮಮಂಜರಿಯನ್ನು ವಿರಚಿಸಿದಾತನಿಗೆ "ತಿಮ್ಮಾಮಾತ್ಯ" ಅಥವಾ ತಿಮ್ಮಾರ್ಯ (ತಿಮ್ಮಯ) ಎಂದು ಹೆಸರು. ಈತನು ಹರಿತಸಗೋತ್ರ, ಆಪಸ್ತಂಬಸೂತ್ರದವನು. ಕವಿಯ ತಂದೆಯ ಹೆಸರು ವೆಂಕಟೇಶಾರ್ಯ (ವೆಂಕಟಾಧಿಪ); ಅಜ್ಜನ ಹೆಸರು ಶೇಷಾರ್ಯ. * ಕವಿಯು ಬೆಂಗಳೂರುಡಿಸ್ಟ್ರಿಕ್ಟಿನ ಆನೆಕಲ್ಲು ತಾಲ್ಲೂಕಿನಲ್ಲಿರುವ ಸಾದನಹಳ್ಳಿ (ಸಹದೇವಪುರಿ) ಯನಿವಾಸಿ. ಈತನ ಮನೆದೇವರು ಅದೇಗ್ರಾಮದಲ್ಲಿರುವ ವೆಂಕಟರಮಣ (ತಿರುಮಲ) ಸ್ವಾಮಿ. ಈ ಕವಿಯು ಶ್ರೀವೈಷ್ಣವ ಮತದವನೆಂದೂ ಈತನವಂಶೀಯರು ಈಗಲೂ ಬೆಂಗಳೂರು ತಾಲ್ಲೂಕಿನ ಅಗರಗ್ರಾಮದಲ್ಲಿ ಇರುವರೆಂದೂ ತಿಳಿಯ ಬಂದಿದೆ. ಪ್ರತಿಕಾಂಡದ ಅಂತ್ಯದಲ್ಲಿಯೂ "ಇದು ಶ್ರೀಪರಮಕಲ್ಯಾಣ ಗುಣಗಣಾಭರಣ ಸುರಕುಲಧುರೀಣ ಮಕುಟಸಂಘಟಿತ ಪರಿಸ್ಫುಟ ಮಣಿಪ್ರಭಾಭಾಸಮಾನ ಚರಣಸರಸೀರುಹ ವೇಂಕಟರಮಣವರಪ್ರಸಾದಲಬ್ಧ ಕವಿತಾವಿಚಕ್ಷಣ ತಿಮ್ಮಯನಾಮಧೇಯ ಕವಿಪ್ರಗುಂಭಿತ ಮಪ್ಪರಾಮಾಭ್ಯುದಯಕಥಾಕುಸುಮಮಂಜರಿಯೊಳ್ ............. ಕಾಂಡ ಸಂಪೂರ್ಣಂ" ಎಂದಿದೆ.

ರಾಮಾಭ್ಯುದಯ ಕಥಾ ಕುಸುಮಮಂಜರಿಯಲ್ಲಿ 'ಬಂದೀಖಾನೆ' [I. ೫.೩೭.], 'ನಿಶಾನಿ' [I. ೧೯. ೧೩.], 'ಹಿಲಾಲು, [I. ೨೪. ೩೪] 'ತಜವಿಜ' [III. ೪. ೬೩], 'ತುರಾಯ್, [IV. ೪. ೯], 'ಪಲ್ಲಕಿ' [VI. ೨೪. ೩೯], 'ಬದುಲು' [VII ೨. ೩೦], 'ಹುಂಮಸು' [VII. ೨. ೩೬; I. ೧೫. ೩.] ಇವೇಮೊದಲಾದ ಅನ್ಯದೇಶೀಯಪದಪ್ರಯೋಗಗಳೂ, 'ಕೆಮ್ಮಟ್ಟ', [V ೧. ೯.], 'ಇದ್ದಬದ್ದ' [IV. ೨. ೩.], 'ಬದ್ದು, [VI. ೧೪. ೪೯.], 'ಕಕಬಿಕ' 'ನರರೋಪಾಯದಿವರೇ' ನೀವು, (IV. ೫. ೪), 'ಮಂಡಿ', [IV.

---

* ಪಾತ್ರ ತರಮೆಂದೆನಿಪ ಹರಿತಸ | ಗೋತ್ರನಾಪಸ್ತಂಬನಾಮಕ | ಸೂತ್ರಕರಿಶೇಷಾರ್ಯನಾತ್ಮಜವೇಂಕಟಾಧಿಪನಾ | ಪುತ್ರತಿಮ್ಮಾಮಾತ್ಯ ರಚಿತ | ವಿಚಿತ್ರರಾಮಚರಿತ್ರಮಿದನುಪ | ವಿತ್ರಗೈದಭಿರ್ವಸುಚ ಸಹದೇವಪುರಿರಾಯ ||[I. ೧. ೧೬.]

೧. ೩೫ ; VI. ೧೮. ೩೫], 'ಗಲಗು', [VI. ೨೩. ೧೫] ಇವೇ ಮೊದಲಾದ ನವೀನಪ್ರಯೋಗಗಳೂ ಕಂಡುಬರುವುವು. ಈ ಪ್ರಯೋಗಗಳನ್ನು ನೋಡಿದರೆ, ಈ ಗ್ರಂಥಕರ್ತನು ಕ್ರಿಸ್ತಶಕ ಹತ್ತೊಂಭತ್ತನೆಯ ಶತಮಾನದ ಪೂರ್ವಾರ್ಧದಲ್ಲಿದ್ದಿರಬಹುದೆಂದು ಊಹಿಸಬಹುದು. ಈತನಕಾಲವನ್ನು ನಿಷ್ಕೃಷ್ಟವಾಗಿ ನಿರ್ಧರಿಸಲು ಮತ್ತೆ ಯಾವಸಾಧನಗಳೂ ದೊರೆತಿಲ್ಲ.

ಈ ಗ್ರಂಥವು ವಾಲ್ಮೀಕಿರಾಮಾಯಣದ ಆಧಾರದಮೇಲೆಯೇ ಹುಟ್ಟಿರುವುದು. ಆಗ್ರಂಥದಲ್ಲಿರುವಂತೆಯೇ ಬಾಲಕಾಂಡ, ಅಯೋಧ್ಯಾಕಾಂಡ ಮುಂತಾದ ಏಳು ವಿಭಾಗಗಳು ಇಲ್ಲಿಯೂ ಇವೆಯೇ ಹೊರತು ಆನಂದರಾಮಾಯಣದಲ್ಲಿರುವ ಒಂಬತ್ತುಕಾಂಡಗಳು * ಕಂಡುಬರುವುದಿಲ್ಲ. ಆದರೆ ವಾಲ್ಮೀಕಿರಾಮಾಯಣಕ್ಕೂ, ಶ್ರೀರಾಮಾಭ್ಯುದಯಕಥಾಕುಸುಮ ಮಂಜರಿಗೂ ಅಲ್ಲಲ್ಲಿ ಕೆಲವು ವ್ಯತ್ಯಾಸಗಳು ಕಂಡುಬರುವುವು. ಆಂಜನೇಯನ ಸಮುದ್ರಲಂಘನವೃತ್ತಾಂತವೂ, ಆತನಪುನರಾಗಮನವಿಚಾರವೂ ವಾಲ್ಮೀಕಿರಾಮಾಯಣದಲ್ಲಿ ಸುಂದರಕಾಂಡದಲ್ಲಿರುವುವು. ಆದರೆ ಈ ಗ್ರಂಥದಲ್ಲಿ ಇವು ಕಿಷ್ಕಿಂಧಾಕಾಂಡದಲ್ಲಿಯೇ ವರ್ಣಿತವಾಗಿವೆ. ಸೇತುಬಂಧನವೃತ್ತಾಂತವು ವಾಲ್ಮೀಕಿರಾಮಾಯಣದಲ್ಲಿ ಯುದ್ಧಕಾಂಡದಲ್ಲಿರುವುದು; ಈ ಗ್ರಂಥದಲ್ಲಾದರೋ ಸುಂದರಕಾಂಡದಲ್ಲಿಯೇ ವರ್ಣಿತವಾಗಿರುವುದು. ವಾಲ್ಮೀಕಿರಾಮಾಯಣದ ಪ್ರಕಾರ ಶತಯೋಜನಾಯತವಾದ ಸೇತುವು ಐದು ದಿನಗಳಲ್ಲಿ ಕ್ರಮವಾಗಿ ೧೪, ೨೦, ೨೧, ೨೨, ೨೩ ಯೋಜನಗಳಷ್ಟುದೂರ ಕಟ್ಟಲಾಯಿತೆಂದು ಹೇಳಿದೆ. [ ವಾಲ್ಮೀಕಿರಾಮಾಯಣ, ಯುದ್ಧಕಾಂಡ ೨೨ ನೆಯಸರ್ಗ ] ಈಗ್ರಂಥದ ಮೇರೆಗೆ ನಾಲ್ಕುದಿನಗಳಲ್ಲಿ ಅನುಕ್ರಮವಾಗಿ೧೪, ೨೬, ೫೦, ೧೦ ಯೋಜನಗಳಂತೆ ಸೇತುಬಂಧನಕಾರ್ಯವು ಮುಗಿಯಿತೆಂದು ಕಂಡುಬರುವುದು. [ಸುಂದರಕಾಂಡ, ೪ನೆಯ ಸಂಧಿ ೪೩-೫೬ ನೆಯ ಪದ್ಯಗಳು]

---

* ೧ ಸಾರಕಾಂಡ, ೨ ಯಾತ್ರಾಕಾಂಡ, ೩ ಯಾಗಕಾಂಡ, ೪ ವಿಲಾಸಕಾಂಡ, ೫ ಜನ್ಮಕಾಂಡ, ೬ ವಿವಾಹಕಾಂಡ, ೭ ರಾಜ್ಯಕಾಂಡ, ೮ ಮನೋಹರಕಾಂಡ, ೯ ಪೂರ್ಣಕಾಂಡ,

ಈ ಗ್ರಂಥದ ಸುಂದರಕಾಂಡದಲ್ಲೇ ಯುದ್ಧಕ್ಕೆ ಆರಂಭವಾಗಿರುವುದು. ವಾಲ್ಮೀಕಿರಾಮಾಯಣದ ಯುದ್ಧಕಾಂಡದಲ್ಲಿ ಕಂಡುಬರುವ ವಿಭೀಷಣನ ಬುದ್ಧಿವಾದವೂ ಶರಣಾಗತಿಯೂ ರಾಮಾಭ್ಯುದಯಕಥಾಕುಸುಮಮಂಜರಿಯಲ್ಲಿ ಸುಂದರಕಾಂಡದಲ್ಲಿಯೇ ಕಂಡುಬರುವುವು. ವಿಶ್ವಕರ್ಮಪುತ್ರನಾದ ನಳನಪೂರ್ವ ವೃತ್ತಾಂತವು ವಾಲ್ಮೀಕಿ ರಾಮಾಯಣದಲ್ಲಿರುವುದಕ್ಕಿಂತ ಈ ಗ್ರಂಥದಲ್ಲಿ ವಿಸ್ತಾರವಾಗಿ ಕೊಟ್ಟಿದೆ. ಚಿಕ್ಕಂದಿನಲ್ಲಿ ನಳನು ಋಷ್ಯಾಶ್ರಮಗಳಿಗೆ ಹೋಗಿ ಋಷಿಗಳ ವ್ರತಪೂಜಾಸಾಧನಗಳನ್ನು ಹುಡುಗಾಟಕ್ಕಾಗಿ ಸಮುದ್ರದಲ್ಲಿ ಬೀಸಾಡುತ್ತಾ ಇದ್ದನೆಂದೂ ಅವಕ್ಕಾಗಿ ಋಷಿಗಳು ಬ್ರಹ್ಮನಬಳಿಗೆಹೋಗಿ ಮೊರೆಯಿಡಲು ನಳನು ಯಾವ ಪದಾರ್ಥವನ್ನು ಸಮುದ್ರದಲ್ಲಿ ಹಾಕಿದರೂ ಅದು ಮುಳುಗದಿರುವುದೆಂದು ಬ್ರಹ್ಮನು ಅಭಯದಾನವನ್ನು ಮಾಡಿದನೆಂದೂ ಈ ಗ್ರಂಥದಲ್ಲಿ ಹೇಳಿದೆ. ವಿಭೀಷಣನ ಶರಣಾಗತಿಯ ಸಂದರ್ಭದಲ್ಲಿ ಬರುವ ಕಪೋತೋಪಾಖ್ಯಾನವೂ ಇಲ್ಲಿ ವಿಸ್ತಾರವಾಗಿ ವರ್ಣಿತವಾಗಿದೆ. ಅದೇ ಸಂದರ್ಭದಲ್ಲಿ ಹೇಳಿರುವ ಕಂಡುವಿನ "ಗಾಥಾ" ಸ್ಥಾನದಲ್ಲಿ ಶ್ರೀರಾಮಾಭ್ಯುದಯ ಕಥಾಕುಸುಮಮಂಜರಿಯಲ್ಲಿ ಮಾರ್ಕಂಡೇಯೋಪಾಖ್ಯಾನವನ್ನು ಸವಿಸ್ತಾರವಾಗಿ ಕೊಟ್ಟಿರುವುದು. ಅತಿಕಾಯನು ರಾಮನನ್ನು ನಿಂದಿಸುವಂತೆ ಸ್ತುತಿಮಾಡಿರುವುದು [ಯುದ್ಧಕಾಂಡ ೧೦ ನೆಯಸಂಧಿ ೫೩–೫೮ ನೆಯ ಪದ್ಯಗಳು] ವಾಲ್ಮೀಕಿ ರಾಮಾಯಣದಲ್ಲಿ ಕಂಡುಬರುವುದಿಲ್ಲ. ಹೀಗೆ ಈ ಗ್ರಂಥಕ್ಕೂ ವಾಲ್ಮೀಕಿ ರಾಮಾಯಣಕ್ಕೂ ಅನೇಕ ವ್ಯತ್ಯಾಸಗಳು ಕಂಡು ಬರುವುವು.

ಈ ಗ್ರಂಥದಲ್ಲಿರುವ ೩೪೪೭ ಪದ್ಯಗಳಲ್ಲಿ ಸುಮಾರು ಹತ್ತು ಶ್ಲೇಷಾಲಂಕಾರವಿಶಿಷ್ಟವಾಗಿವೆ. ಶಬ್ದಾಲಂಕಾರಯುಕ್ತವಾದ ಪದ್ಯಗಳೂ ಕೆಲವು ಸಿಕ್ಕುವುವು [ಉದಾಹರಣೆಗಾಗಿ I. ೩. ೧೩; I. ೫೦, ೭೮. ೭೯; I. ೮. ೧೩; I. ೯. ೭; VI. ೨೫. ೧೧ನೆಯ ಪದ್ಯಗಳನ್ನು ನೋಡಿ] ಉಪಮಾರೂಪಕೋತ್ಪ್ರೇಕ್ಷಾಲಂಕಾರಗಳು ಅನೇಕಪದ್ಯಗಳಲ್ಲಿ ಕಂಡುಬರುವುವು. ಇದಕ್ಕಿಂತಲೂ ಹೆಚ್ಚಾದ ಯಾವ ಆಡಂಬರಕ್ಕೂ ಕವಿಯು ಕೈಹಾಕಿರುವುದಿಲ್ಲ. ಹೇಳಬೇಕಾಗಿರುವ ಕಥಾವಿಷಯವನ್ನು ಸ್ವಲ್ಪ

ವಾವರೂ ಶ್ರಮಿಸಟ್ಟುಕೊಳ್ಳದೆ ಲಲಿತವಾಗಿ ವಿವರಿಸಿರುವನು. ಆದುದ ರಿಂದ ಈತನ ಪದ್ಯರಚನೆಯು ನಿರರ್ಗಳವಾಗಿರುವುದೆನ್ನಬಹುದು. ಈ ಪದ್ಯಗ್ರಂಥದಲ್ಲಿ ಗರ್ಭೀಕರಿಸಿರುವ ೫೮ ಪದ್ಯಗಳಜೊತೆಗೆ, ಈ ಗ್ರಂಥ ಕರ್ತನ ಶೈಲಿಯನ್ನು ಮತ್ತಷ್ಟು ವ್ಯಕ್ತಪಡಿಸುವುದಕ್ಕಾಗಿ ಕೆಲವುಪದ್ಯಗ ಳನ್ನು ಈ ಮುಂದೆ ಕೊಡಲಾಗಿರುವುದು.

ಮುರಿದನಿಂದ್ರನು ಪರಿದನನಲನು
ಸರಿದನರ್ಕಜ ಜರಿದನೈಋತಿ
ಕಿರಿದಪಲುಗಳನಬುಧಿಪತಿ ಮಸಬಿರಿದ ಮಾರುತನು ।
ನೆರವನರಸದೆ ಪಾರ್ದನಲಕೇ
ಶ್ವರನು ಮೇಣೀಶಾನನೆತ್ತಣ
ಗಿರಿಗೆ ಸಾರ್ದನೊ ಕಾಣೆನಸುರನ ಘಾತಭೀತಿಯಲಿ ॥[I.೫.೧೯]

ಕಾಮುಕಗೆ ಭಯಲಜ್ಜೆ ವಿದ್ಯಾ
ಕಾಮನಿಗೆ ಸುಖನಿದ್ರೆ ದ್ರವ್ಯಾ
ಶಾಮನಗೆ ಗುರುಬಂಧು ಕ್ಷುಧೆಯುಳ್ಳವಗೆ ರುಚಿಸೌಖ್ಯ ।
ಭೂಮಿಯಲಿ ತೋರದಿಹುದೆಂ*ಬುದ
ನೀಮದಾಂಧನಲೀಕ್ಷಿಸಿದೆನೆಂ
ದಾಮಹಾಮಾರೀಚನುಡಿದನು ಪಜ್ಕ್ತಿಕಂಧರಗೆ ॥III.೪.೩೯

ಎಲವೆಲವೊಕೊಲ್ಲದಿರಿ ನಿರ್ಜರ
ಕಾಲವಿರೋಧಿದಶಾನನಗೆ ಬಾ
ಳ್ದಲೆಯನೊಪ್ಪಿಸಿ ಪಡೆವೆ ಬಹುಮಾನಗಳನೆಂದೆನುತ ।

---

* ಅರ್ಥಾತುರಾಣಾಂ ನ ಗುರುಃ ನ ಬಂಧುಃ
ಕಾಮಾತುರಾಣಾಂ ನ ಭಯಂ ನ ಲಜ್ಜಾ
ವಿದ್ಯಾತುರಾಣಾಂ ನ ಸುಖಂ ನ ನಿದ್ರಾ
ಕ್ಷುಧಾತುರಾಣಾಂ ನ ರುಚಿಃ ನ ಪಕ್ವಂ ॥

ಎಂಬುದರ ಅನುವಾದ.

ಕಿಲಕಿಲಾರ್ಭಟದಿಂದ ಬಂಡಿಯೊ
ಳಳವಡಿಸಿ ರಾಕ್ಷಸರಕೈಯಿಂ
ದೆಳಸಿಕೊಂಡೊಯ್ದಿಟ್ಟನಾಲಂಕೇಶಸಿದಿರಿನಲಿ ॥ [IV. ೫ ೪೯]
ಪಿಡಿದೆನಿಂದ್ರನ ತೊಡೆದೆನನಲನ
ಬಡಿದೆ ಶಮನನ ಜಡಿದೆ ನಿಋತಿಯು
ಕಡಿದೆ ವರುಣಮರುತ್ಕುಬೇರೇಶಾನಮುಖ್ಯರನು ।
ಮೃಡನ ವರಗಳ ಪಡೆದ ಕಡುಗಲಿ
ಯೊಡನೆ ಕೋಡಗ ಪಡೆಯು ಮನುಜರ
ಸಡಗರವ ನೇನೆಂದು ಪೊಗಳದೆ ಯೆನುತ ಗರ್ಜಿಸಿದ ॥ [V. ೨. ೫೫]
ಮುತ್ತಿದಹಿತರ ನೋಡಿ ಖಳರೊರೆ
ಗಿತ್ತು ಕತ್ತಿಗಳೆತ್ತಿ ಹೂಂಕರಿ
ಸುತ್ತ ಬೆಂಬರಿವುತ್ತ ತೋಳ್ಗಳಚುತ್ತ ತೆಗೆತೆಗೆದು ।
ಕತ್ತರಿಸಿ ಚಿಗಿವುತ್ತ ಗೋಣಿನ
ನೆತ್ತರಲಿ ಕಲಸುತ್ತ ಮಾಂಸದ
ಮತ್ತ ಭೂತದವೊತ್ತುಗಳಿಗುಣಿಸುತ್ತ ತಣಿಸಿದರು ॥

VI.೧೪.೫೦ ಈ ಕವಿಗೆ "ಕುಸ್ತರಿಸು" ಎಂಬಪದದಮೇಲೆ ಬಹಳ ಪ್ರೀತಿಯೆಂದು ಕಾಣುವುದು. ಇದನ್ನು ಅನೇಕಾವೃತ್ತಿ ಉಪಯೋಗಿಸಿರುವನು. ಉದಾ: II. . ೩. ೨೯, ೫೩ ; III. ೬. ೪ ; IV. ೧. ೬೬, VI. ೨೨. ೩೯ ; VII. ೨. ೩೦.

ತ್ವರಿತದಿಂದ ಈಸಲದ ಪತ್ಯಪುಸ್ತಕವನ್ನು ಪ್ರಚಾರಪಡಿಸಬೇಕಾದುದರಿಂದ ಟಿಪ್ಪಣಗಳನ್ನು ಕೊಡಲಾಗಲಿಲ್ಲ. ಚೆನ್ನಬಸವಪುರಾಣಭಾಗವನ್ನು ಆ ಗ್ರಂಥದ ಅಚ್ಚಿನ ಆರುಪ್ರತಿಗಳ ಸಹಾಯದಿಂದಲೂ, ರಾಮಾಭ್ಯುದಯಕಥಾಕುಸುಮಮಂಜರಿಯ ಭಾಗವನ್ನು ಒಂದು ಪ್ರತಿಯ ಸಹಾಯದಿಂದಲೂ ಪ್ರಕಟಿಸಲಾಗಿದೆ.

೧೦-೬-೧೯೨೧,
ಮೈಸೂರು.

ಬಿ ಕೃಷ್ಣಪ್ಪ.

# ಶೋಧನಪತ್ರ.

| ಪುಟ. | ಪದ್ಯ. | ಪಾದ. | ಅಶುದ್ಧ. | ಶುದ್ಧ. |
|---|---|---|---|---|
| ೯ | ೩೪ | ೬ | ತುಂಬಿತಮರುರಾವತಿಯೊ | ತುಂಬಿತಮರಾವತಿಯೊಳು |
| ೧೧ | ೧ | ೧ | ಎರಗಿದ | ಎರಗದ |
| ೧೨ | ೩ | ೧ | ದವೀರ್ಬಲದ | ದುವಿರ್ಬಲದ |
| ೧೩ | ೬ | ೬ | ನದ್ಭುತವನ | ನದ್ಭುತವನು |
| ೧೩ | ೯ | ೫ | ಕೈಚಳಕವುಂನಿ | ಕೈಚಳಕವುಂ |
| ,, | ,, | ೬ | ರ್ಧರಿಸಲರಿದೆಂಬ | ನಿರ್ಧರಿಸಲರಿದೆಂಬ |
| ೧೪ | ೧೨ | ೨ | ಮರಳುಬಲು | ಮರುಳಬಲು |
| ೧೪ | ೧೩ | ೪ | ರಕ್ತಿಯುಡಿದುವು | ಶಕ್ತಿಯುಡಿದುವು |
| ೧೮ | ೨೮ | ೨ | ನುಗಿದು | ನುಗಿದುಮರೆ |
| ,, | ,, | ೩ | ಮರೆಮಾಡಿದರು | ಮಾಡಿದರು |
| ೨೧ | ೩೫ | ೨ | ಪಣಿದಿಭ | ಪಣ್ಣಿದಿಭ |
| ೨೩ | ೪ | ೧ | ಶಧಿಶರಧಿಗಳ್ | ಶರಧಿಶರಧಿಗಳ್ |

# ಚೆನ್ನಬಸವಪುರಾಣ

## ಎರಡನೆಯ ಕಾಂಡ

### ೧೨ನೆಯ ಸಂಧಿ

ಸೂಚನೆ॥ ಸುರಪಾಲನಭವನಂ ಹಗೆಯನೊಲವಿಂ ಕೇಳ್
ಹರನ ಹಣೆಗಣ್ಣಿಡಿಯೆ ಶರಧಿಗಂ ಸುತನಾಗಿ
ವರಜಲಂಧರನೆಂಬ ನಾಮದಿಂ ಸುರಪುರಕೆ ದಂಡೆತ್ತಿ ನಡೆತಂದನು ॥

ಅಭ್ರಗಮನೇಂದ್ವಗ್ನಿವಿಭ್ರಾಜಿತಾಕ್ಷ ಲೋ
ಲಭ್ರಮರ ನಿಭಗರಳ ಶುಭ್ರವಿಗ್ರಹ ವಧೂ
ವಿಭ್ರಮಾಲೋಕ ದೈತ್ಯಭ್ರಷ್ಟ ಸುಮದ ವಿಪುಳಾಭ್ರಸ್ರಚಂಡಪವನ ।
ಅಭ್ರಾಂತರಾಳಸಂವಿಭ್ರಾಂತಚಾರುತರ
ಶುಭ್ರಾಂಶುಕೋಟಿಕಾಂತಿಶ್ರಿತಶರೀರ ರುಚಿ
ರಭ್ರೂಲತಾಶೋಭ ಪಂಪಾವಿರೂಪಾಕ್ಷ ತಿಬ್ರದಿಂ ಸಲಹೆಮ್ಮನು ॥ ೧

ಆಲಿಸಿನ್ನೆಲೆ ಸಿದ್ಧರಾಮ ದಿವಿಜೇಶ್ವರಂ
ಭಾಳಲೋಚನನಂಘ್ರಿಪೂಜಾಫಲಾಳಿಯಿಂ
ಪಾಲಿಸುತ ಸುರಲೋಕದೊಳ್ ಸುಖದೊಳಿರುತಿರಲು ದಾಯಾದ್ಯಸಂಬಂಧದ ।
ಪಾಲಿಗೋಸುಗ ದನುಜರಂದು ಯುದ್ಧವನೂಡೆ
ಕಾಳಗದೊಳವರೆಲ್ಲರಂ ಗೆಲ್ದು ಸುಖವಿಂದದೆ
ಕಾಲಹರನೆಡೆಗೆ ಹಗೆಯಂ ಕೇಳ್ವೆನೆಂದು ಪೊರಮಟ್ಟನತ್ಯುತ್ಸವದೊಳು ॥೨

ಬಂದು ಕೈಲಾಸದಾಸ್ಥಾನದೊಳು ಸಕಲಗಣ
ಬೃಂದಸಹಿತೊಡ್ಡೋಲಗದೊಳಿರ್ಪ ಶಿವನಡಿಗೆ
ವಂದಿಸಿ ಮಹಾಭಕ್ತಿಯಿಂದೆ ಬಿನ್ನವಿಸಿದಂ ಮಕುಟತಟಹಸ್ತನಾಗಿ ।
ಇಂದುಶೇಖರನೆ ಕರುಣಿಸುವುದೆನ್ನೊಡನಾನ್ತು
ನಿಂದು ಕಾದುವ ಸಮರ್ಥನನೆನಲು ನಸುನಕ್ಕು
ಮುಂದರಿಯದಿಂತು ನುಡಿಯಲ್ಬೇಡವೆನೆ ಸುರಪನಭವನೊಡನಿಂತೆಂದನು ॥೩

ಜಂಭ ಬಲ ನಮುಚಿ ವೃತ್ರಾದಿ ಖಳರಂ ಕದನ
ಕುಂಭಿನಿಯೊಳೋಡಿಸಿದೆನಂದಿನಿಂ ಸಮರ ಸಂ
ರಂಭಮೇ ಕನಸಾಯ್ತು ಸರ್ವದಾ ನನಗೊಬ್ಬ ಶತ್ರುವಂ ಕರುಣಿಸೆನಲು।
ಜಂಭಾರಿ ನುಡಿದಹಂಕಾರಮಂ ಕೇಳ್ದು ಕೋ
ಪಂ ಭರದೊಳುಬ್ಬರಿಸಿ ಸುರಪಾಲನಂ ಸುಡಲು
ಶಂಭು ಫಾಳಾಂಬಕಜ್ವಾಲೆಯೊಳಗೊಂದು ಕಿಡಿಯುಂ ಪೊಣಮುಗುಳಿಸಿದನು ॥ ೪

ಸಾಕು ಸಾಕೆಲೆ ಮಹಾದೇವ ದೇವೇಶ ಕರು
ಣಾಕರ ಕೃಪಾಬ್ಧಿ ಶಂಕರ ಶರ್ವ ನೀಂ ಮುನಿಯೆ
ಪಾಕಶಾಸನನದೇಂ ದಕ್ಷನೇ ? ಕಿಡಿಯನುಪಸಂಹರಿಸಬೇಕೆನುತ್ತ ।
ನಾಕವಾಸಿಗಳ ಗುರು ಶಿವನಡಿಗೆ ನಮಿಸೆ ಬಳಿ
ಕಾ ಕಿಡಿಯನೀಶ್ವರಂ ಹಸ್ತದೊಳು ಪಿಡಿದು ರ
ತ್ನಾಕರಕೆ ಬಿಸುಟಿಂದ್ರ ಶತ್ರುವಂ ಕೊಟ್ಟೆವಾಂ ಪೋಗೆನುತ ಬೀಳ್ಕೊಟ್ಟನು ॥೫

ಇತ್ತಲಮರೇಂದ್ರನಭವನನಿರದೆ ಬೀಳ್ಕೊಂಡು
ಚಿತ್ತದಾನಂದದಿಂ ಸುರಪುರಕೆ ನಡೆತಂದ
ನತ್ತಲಾ ಹರನಿಟ್ಟ ಕಿಡಿ ಬಾಲನಾಗಿ ಗಂಗಾಸಿಂಧುಸಂಗಮದೊಳು ।
ಬಿತ್ತರದೊಳಳುತಿರಲು ಶುಂಭನೆಂಬಾತ್ಮಜಂ
ಸತ್ತುಹೋಗಲು ಸುರಪನಂ ಗೆಲ್ವ ಕುವರನಂ
ಪೆತ್ತಪೆನೆನುತ್ತ ಶಿವನಂ ಕೂರ್ತು ತಪಿಸುತ್ತೆ ಶರಧಿಸುತನಂ ಕಂಡನು ॥೬

ಹರುಷದಿಂದಾ ಶಿಶುವನೆತ್ತಿ ತೊಡೆಯೊಳಗಿರಿಸೆ
ಸರಸಿಜ ಭವಾಂಡವೊಡೆವಂತೆ ಶಿಶು ಕೂಗಲಾ
ಸರದ ಬಳಿವಿಡಿದೆಲ್ಲಿಯುದು ಬೊಬ್ಬೆಯೆನುತಜಂ ಬಾಲನಿದ್ದಲ್ಲಿಗೈದೆ ।
ಪರಮೇಷ್ಠಿಯಂ ಕಂಡು ನಮಿಸಿ ಮತ್ತನುಜಂಗೆ
ಕರುಣದಿಂ ಪೆಸರಿಟ್ಟು ಜಗದೊಳಾರಿಂದಲುಂ
ಮರಣವಾಗದೊಲು ವರವೀವುದೆಂದಜನ ಕೈಗಬ್ಧಿಸುತನಂ ಕೊಟ್ಟನು ॥೭

ಸರಸಿಜಭವಂ ಶರಧಿಜಾತನಂ ತೊಡೆಯು ಮೇ
ಲಿರಿಸಿಕೊಂಡವನ ಭದ್ರಾಕಾರಮಂ ನೋಡು
ತಿರಲಜನ ಗಡ್ಡಮಂ ತೂನಲ್ಕೆ ಕಡು ನೊಂದು ಕಣ್ಣನೀರವನ ಮೇಲೆ ।
ಸುರಿಯಲಾಯಾಸದಿಂ ಬಿಡಿಸಿಕೊಂಡೆಂಗನೆಲೆ
ಶರಧಿ ಕೇಳಿವನೆನ್ನ ಕಂಗಳ ಜಲಂಗಳಂ
ಧರಿಸಿದ ನಿಮಿತ್ತದಿಂ ವರ ಜಲಂಧರನಿವಂ ಸಾಮಾನ್ಯನಲ್ಲೆಂದನು ॥ ೮

ಆವನಿಂದೀತಂಗೆ ಜನನಮವನಿಂದಲೇ
ಸಾವು ಪೊಸ ಕೈದುವಿಂದಲ್ಲದುಳಿದೀ ಕ್ಷುದ್ರ
ದೇವಾಸುರೋರಗನರಾಳಿಯಿಂದಳಿಯಬೇಡೆಂದು ವರವಂ ಪಾಲಿಸಿ ।
ಆವೇಳೆಯೊಳು ಶುಕ್ರನಿಂದಸುರರಾಜನೆಂ
ಬೀ ವಿಮಲನಾಮದಿಂ ಪಟ್ಟಮಂ ರಚಿಸಿ ರಾ
ಜೀವಪೀಠಂ ಪೋದನತ್ತಲುಂ ದಿನದಿನಕ್ಕೀತನಭಿವರ್ಧಿಸಿದನು ॥ ೯

ಶುಕ್ರನೀತಂಗೆ ಕ್ರೌಂಚನ ಮಗಳು ವೃಂದೆಯಂ
ಶಕ್ರವಿಭವದೆ ಮದುವೆಯಂ ಮಾಡಿದಂ ಮಹಾ
ವಿಕ್ರಮಾನ್ವಿತನಾಗಿ ಜಾಳಂಧರಾಹ್ವಯದ ಬಲುರಾಜಧಾನಿಯೊಳಗೆ ।
ವಕ್ರವೈಭವರಾಗಿ ಗಿರಿಯೊಳಡಗಿರ್ದಸುರ
ಚಕ್ರಮಂ ಕರೆಸಿಕೊಳುತ ವೃಂದೆಯೊಡ
ನೀಕ್ರಮದೊಳಿಳಿವಿನೋದಂಗಳಿಂ ಖಳರಾಜನಿರುತಿರ್ದನುತ್ಸವದೊಳು ॥೧೦

ಆಲಿಸೈ ಸಿದ್ಧರಾಮೇಶ ಸುಖವಿರುತಸುರ
ಪಾಲಕ ಜಲಂಧರಂ ಲೀಲೆಯಿಂ ತನ್ನವರ
ಜಾಲಂಧರಾಖ್ಯಪುರದೊಳಗಿರುತೊಂದುದಿನ ಓಲಗದೊಳೊಪ್ಪುತಿರಲು।
ಲೀಲೆಯಿಂದಸುರಗುರು ಬಲಗಡೆಯೊಳಿರೆ ಬಂಧು
ಜಾಲಮಿರೆ ಪಿಂದೆಸೆಯೊಳಖಿಳರಾಕ್ಷಸ ಸುಭಟ
ರೋಲಗಕೆ ಬರುತಿರ್ದರದ್ಭುತಾಕಾರದಿಂ ಪೇಳ್ವುದೇನಚ್ಚರಿಯನು॥೧೧

ಪೊಳೆವ ಕೆವಿಮ್ಮೀಸೆಗಳ ಕಾರೊಡಲ ಕೆಂಗಣ್ಣ
ಬಳೆದ ಭುಜದುಬ್ಬುಗಳ ಸಲೆಮುಸುಡ ಕೊಬ್ಬುಗಳ
ತಳೆದ ಕೈದುಗಳ ಜುಂಜುರುದಲೆಯ ಬರಸಿಡಿಲ ಜಂಗುಳಿಯ ಗರ್ಜನೆಗಳ।
ಥಳಥಳಿಪ ಕೋರದಾಡೆಗಳ ಕರ್ಕಶ ರೋಮ
ವಳವಟ್ಟ ಬಿರುದು ಹಾಪೆಗಳ ಮಣಿಮಕುಟದೊ
ಬ್ಬುಳಿಯ ಬೆಳಗಿನ ಬಿರುಸು ನಡೆಯ ರಾಕ್ಷಸಸುಭಟರೋಲಗಕೆ ಬರು
ತಿರ್ದರು॥ ೧೨

ಶ್ವೇತವಂತಂ ಸುಪಾರ್ಶ್ವಂ ಪ್ರಜಂಘಂ ಮಯಂ
ನೀತಿವಂತಂ ವಿಪ್ರಜಿತು ವಿರೂಪಾಕ್ಷಂ ಮ
ಹಾತಿಬಲವಿದ್ರಾವಣಂ ಮಹಾನಾಭಂ ಪುಲೋಮಂ ಮರೀಚಿ ಮದಿರಂ।
ಕೇತುವುಂ ಜರ್ಝರಂ ವಾಮನಂ ಗಜಶಿರಂ
ಕೇತುವೀರ್ಯಂ ನಮುಚಿ ಮುಂತಾದ ಖಳನೃಪ
ವ್ರಾತಮೈತರುತಿರ್ದರಾ ಜಲಂಧರನೋಲಗಕ್ಕೆ ಬಹುಭೀಕರದೊಳು॥೧೩

ಅರಿಬಲಪ್ರಳಯಪ್ರಚಂಡನುಂ ಚಂಡನುಂ
ಧುರವಿಜಯ ಘನತಟತ್‌ಕೇತುವುಂ ಕೇತುವುಂ
ಪರಮವಿಕ್ರಮನಾಗಿ ಶುಂಭನುಂ ಶುಂಭನುಂ ಮಧುಮತ್ತ ಧೂಮ್ರಾ
ಕ್ಷರು।
ಗುರುಭೀಷಣಾಂಗ ಪ್ರಹೇತಿಯುಂ ಹೇತಿಯುಂ
ಸುರಬಲಾಪಹ ದೀರ್ಘಬಾಹುವುಂ ಬಾಹುವುಂ
ದುರುಳದಾನವ ಖಡ್ಗರೋಮನುಂ ಭೀಮನುಂ ಖಳನೋಲಗಕೆ
ಬಂದರು॥೧೪

ಕಾಲನ ಮಹಾಕಾಲದಂಡವಮಂ ಸೆಳೆವ ಲಯ
ಕಾಲಭೈರವನ ದಾಡೆಯನುಗಿವ ಕೋಪದಿಂ
ಕಾಲಮೃತ್ಯುವಿನ ಗಂಟಲನರಿವ ಗಿರಿಗಳಂಕಿಳ್ತು ತಿರಿಕಲ್ಲಾಡುವ ।
ಕಾಲಮೇಘದ ಸಿಡಿಲ ತೊಡಿಗೆಯಂ ಸಲೆ ತೊಡುವ
ಕಾಲದೊಳ್ ಪ್ರಳಯಂಗಳಂ ಮಾಳ್ಪ ಭೀಕರದ
ಕಾಲರಕ್ಕಸರೈದಿ ಸಂದಣಿಸಿ ನಿಂದಿರ್ದರೇನೆಂಬೆನಚ್ಚರಿಯನು ॥ ೧೫

ಇಂತು ಖಳರಾಜನೊಡ್ಡೋಲಗದೊಳಿರ್ಪ್ಪ ಸಮ
ನಂತರದೊಳತುಳಭಯಭಕ್ತಿಯಿಂದಾಕ್ಷಣಂ
ಮುಂತಿಪ್ಪ ರಾಹುಕೇತುಗಳನೀಕ್ಷಿಸಿ ಮಹಾವಿಸ್ಮಯಸ್ವಾಂತನಾಗಿ ।
ಇಂತಿದೇನೊಂದುತನುವೆರಡಾದ ಕಾರಣಮಿ
ದಂ ತಿಳಿಯುಪೇಳೆಂದು ಶುಕ್ರನಂ ಬೆಸಗೊಳುತ
ದಂತರುಚಿ ಭಿತ್ತಿಯನಲಂಕರಿಸೆ ಪೇಳ್ದನವದಿರ ಪೂರ್ವಸಂಗತಿ
ಯನು ॥೧೬

ಕೇಳಾದೊಡೆಲೆ ಜಲಂಧರ ಪಿಂತೆ ದಿವಿಜಕುಲ
ಪಾಲಕಂ ಸಕಲ ದೇವಾಸುರರ್ವೆರಸಿ ಘನ
ಲೀಲೆಯಿಂ ಶರಧಿಯಂ ಮಥಿಸಿ ಸುರತರು ದಿವಿಜಮಣಿ ದಿವಿಜಧೇನುವೆಂಬ।
ಮೇಲಾದವಸ್ತುಗಳ್ವೆರಸಿ ಸುಧೆಯುದಿಸೆ ಲ
ಕ್ಷ್ಮೀಲೋಲನಾ ಸುಧೆಯನಮರಾಸುರವ್ರಜಕೆ
ಕೌಳಿಕದೊಳೆರೆಯೆ ಶಶಿರವಿಯ ಕೊಂಡೆಯದೆ ತಲೆಯರಿಯಲಿಂತಾಯ್ತೆಂ
ದನು ॥ ೧೭

ಕೇಳಿ ಘುಡಿಘುಡಿಸಿ ಕೋಪಾಗ್ನಿ ಸ್ಫುಲಿಂಗಪ್ರ
ಲೋಲಭೀಷಣನಯನ ಸಮ್ಮಿಳಿತಗುರುತರ ಕ
ರಾಳಮುಖನಾಗಿ ನುಡಿದಂ ತಮ್ಮ ತಂದೆಯಂ ಮಥಿಸಿ ನಾನಾವಸ್ತುವಂ ।
ಖೂಳನೊಯ್ದನೆ ತನ್ನ ಬಸುರನುಗಿದಾಂ ಕರುಳ
ಜಾಳಮಂ ರಣಭೂತಕುಣಿಸುವೆಂ ಬಲವಯ್ದ
ಹೇಳೆನುತ ಗರ್ಜಿಸುತಿರ್ದ ಖಳರಾಜನೊಡನಸುರಗುರುವಿಂತೆಂದನು॥೧೮

ಸಾಮಮುಂ ಭೇದಮುಂ ದಾನಮುಂ ದಂಡಮುಂ
ಭೂಮಿಪತಿಗಳ ನೀತಿ ಕೇಳ್ ಚರರನಟ್ಟಿ ಸು
ತ್ರಾಮನಂ ವಸ್ತುವಂ ಬೇಡಿಸುವುದೀಯದೊಡೆ ದಂಡದಿಂ ಕೊಂಬುದೆ
ನಲು ।
ಆಮಾತಕೇಳಿ ಚರನೊರ್ವನಂ ಕರೆದು ನೀ
ತಾಮಸವ ಮಾಡದಿಂದ್ರನ ಬಳಿಗೆ ಪೋಗಿ ಯೆ
ಮ್ಮಾಮಹಾವಸ್ತುವಂ ಕೊಟ್ಟೆಮ್ಮ ಕಂಡು ಬದುಕೆಂದುಸುರು ಪೋಗೆಂ
ದನು ॥೧೯

ಚರನಸುರರಾಜನಂ ಬೀಳ್ಕೊಂಡು ಬೇಗದಿಂ
ಸುರಪುರಕೆ ನಡೆತಂದು ಬಾಗಿಲೊಳು ತಡೆದರಂ
ಸರಕುಮಾಡದೆ ಪೊಕ್ಕು ಸುರಪನಾಸ್ಥಾನಕ್ಕೆ ಬರಲವನ ದಿಟ್ಟತನವ ।
ಸುರಮಂತ್ರಿ ಕಂಡು ನೀನಾರದೂತಂ ? ನಮ್ಮ
ಪುರಕದೇಂ ಕಾರಣಂ ಬಂದೆ ? ಕಳುಹಿದರಾರು ?
ನಿರುತದಿಂ ಪೇಳೆನಲ್ಕಾಗಳಾ ಖಳನ ಚರನಿಂತೆಂದನು ॥ ೨೦

ಸಕಲಸುರವಾರ್ಧಿವಡಬಂ ದಿವಿಜಕುಲಶರಭ
ನಿಕರಭೇರುಂಡನಸುರೇಂದ್ರಮಸ್ತಕದಮಾ
ಣಿಕ ಜಲಂಧರನ ದೂತಂ ಪಿಂತೆ ಯೆಮ್ಮಾಳ್ದನಯ್ಯನಂ ಬಿಡದೆ ಮಥಿಸಿ।
ಪ್ರಕಟತರ ವಸ್ತುಗಳನೊಯ್ದಿರಿ ಗಡಸುರನಾ
ಯಕನವಂ ಬೇಡಲಟ್ಟಿದನೆನ್ನನೀವುದೇ
ಯುಕುತಿ ಯಲ್ಲದೊಡೆ ರಣಸನ್ನಾಹವಾಗಿ ಯೆನೆ ದಿವಿಜಗುರುವಿಂತೆಂ
ದನು ॥೨೧

ದೂರ್ವಾಸ ಮುನಿವರಂ ಕೊಟ್ಟ ಶಾಪದೊಳೀ ಸು
ಪರ್ವರಾಜನ ವಸ್ತುಗಳು ಶರಧಿಯೊಳು ಕೂಡೆ
ಶರ್ವನಾಜ್ಞೆಯೊಳದಂ ಮಥಿಸಿ ತದ್ವಸ್ತುವಂ ತಂದೆವಾಂ ಪರರೊಡವೆ
ಯಂ ।
ಪಾರ್ವನೇ ಸುರರಾಜನೆನೆ ಕೇಳ್ದು ಕಲಹಮುಂ
ನಿರ್ವಹಿಸಲಾಪಿರೇ ಮದ್ವಸ್ತುವಂ ಕೊಟ್ಟು
ಸರ್ವಥಾ ಕಂಡುಬದುಕುವುದೆಂದು ಸಾರಿಬಂದೊಡೆಯನೊಡನಿಂತೆಂ
ದನು ॥೨೨

ಜೀಯ ನೀವೆಂದಂತೆ ಯಾಂಪೋಗಿ ನಿರ್ಜರರ
ರಾಯನಂ ವಸ್ತುವಂ ಬೇಡಲಿಂದೆನಗೆ ಪ
ರ್ಯಾಯಮಂ ನುಡಿದನಲ್ಲದೆ ಕೊಟ್ಟುಕೊಂಬ ಮಾತಿನಿತಿಲ್ಲಮೆಂದೆನಲ್ಕೆ।
ಕಾಯದೊಳ್ [1] ಭುಗುಭುಗಿಸಿ [1] ಕೋಪಾಗ್ನಿ ಪರ್ಬೆ ಪೂ
ರಾಯಮಾಗಲ್ಕವಂ ಕರೆಕರೆ ಸಮಸ್ತ ಖಳ
ನಾಯಕರನೀಗ ಪ್ರಸ್ಥಾನಭೇರಿಯಂಪೊಯ್ಯುವುದೆಂದವಂ ನೇಮಿಸಿದನು॥ ೨೩

ಸಂಧಿಮುರಿದುದು ತೊಲಗಿತೊಲಗಿ ದಿವಿಜರೆ ವೈರಿ
ಗಂಧೇಭಹರ್ಯಕ್ಷನೈತಹಂ ಪರರಾಜ
ಸಿಂಧುವಾಡಬನಿದೆಕೊ ಬಂದನಾಶಾಧಿಪರ್ ಬಿಟ್ಟೋಡಿ ಕಂಡಕಡೆಗೆ ।
ಕಂಧರಮನುಳುಹಿಕೊಳ್ಳನುತ ಸಾರುವ ತೆರದಿ
ದಂಧಳಂ ಧಳಧಳಧಳೆಂಬ ಭೀಷಣದಿಂ ಜ
ಲಂಧರ ಪ್ರಸ್ಥಾನಭೂರಿಭೇರೀರವಂ ಪೊಣ್ಮಿತು ಜಗತ್ತ್ರಯದೊಳು॥ ೨೪

ವಾಜಿಗಳನಿರದೆ ಹಲ್ಲಣಿಸಿದರ್ ಮತ್ತಗಜ
ರಾಜಿಗಂ ರೆಂಚಿಕೆಯನಿಕ್ಕಿದರು ತೇರ್ಗಳುಮ
ನೋಜೆಯುಂ ಪಣ್ಣಿದರ್ ಜೋಡುಸೀಸಕವಿಕ್ಕಿ ಕಾಲಾಳ್ಗಳನುವಾದರು ।
ರಾಜಿಸುವ ಬಹುವಿಧದ ವಾದ್ಯಂಗಳಾರ್ಭಟೆಗೆ
ಮೂಜಗಂ ತಲ್ಲಣಿಸಿತಾಕ್ಷಣದೊಳಸುರಕುಲ
ರಾಜನತಿಸಂಭ್ರಮದೆ ತನ್ನಗುರುವಿತ್ತ ಸುಮುಹೂರ್ತದೊಳು ಪೊರಮ
ಟ್ಟನು ॥ ೨೫

ಭಟರ ಹೂಂಕೃತಿ ಗಜದ ಬೃಂಹಿತಂ ವಾಜಿಗಳ
ಪಟುಹೇಷಿತಂ ತೇರಚೀತ್ಕೃತಂ ವೀರಕರ
ಘಟಿತಶಸ್ತ್ರದ ಖಣಿಖಟಿಲ್ಧನಿ ಮದೇಭಘಂಟಾರವಂ ತುರಗಚಯದ ।
ತುಟಿಯಿನುಣ್ಮುವ ಕಡಿಯಣದ ಖಣಖಣಧ್ವಾನ
ಮಟನದ ರಥಾಶ್ವಖುರಪುಟ ಘುರುಘುರುಸ್ವನಂ
ಪಟಹ ತಂಬಟ ಢಕ್ಕೆಗಳರವಂ ಬ್ರಹ್ಮಾಂಡಘಟಮನಲ್ಲಾಡಿಸಿದುದು ॥ ೨೬

---

1 ಘುಗುಳಿದಿಸಿ

ರಾಮಕೇಳ್ಯೆದುಪದ್ಮಂ ವರೂಥಂ ಸಮದ
ಸಾಮಜಂ ನೂರುಪದ್ಮಂ ವಾಯುವೇಗನಿ
ಸ್ಸೀಮವಾಜಿಗಳುಂ ಸಹಸ್ರಪದ್ಮಂ ಶತಸಹಸ್ರಪದ್ಮಂ ಸುಭಟರು ।
ಈ ಮಹಾಗಣನೆಯೊರ್ವನಸೇನೆ ಯಿಂತಪ್ಪ
ಭೀಮರೂಪಿನ ದೈತ್ಯನಾಯಕರು ಸಂಗರೋ
ದ್ದಾಮರೇ ಶತಕೋಟಿಪದ್ಮಂಗಳೊಡನೆ ರಕ್ಕಸರಾಯನೈತಂದನು ॥೨೭

ಒಡನೆ ನಡೆದುದು ಜಲಂಧರನ ತೂಕದ ದೈತ್ಯ
ರೆಡಬಲದ ಕರಿ ತುರಗ ರಥ ಪದಾತಿಗಳ ಮಂ
ಗಡದೊಳಾರ್ಭಟಿಪ ವಂದಿಗಳ ಕಳಕಳದ ಬಗೆಬಗೆಯ ವಾದ್ಯಧ್ವನಿಗಳ।
ಗಡಬಡೆಯೊಳಖಿಳ ಬೊಮ್ಮಾಂಡಂಗಳೂಳಿಯಿಂ
ದೊಡೆಯದಿರದೆನೆ ಭೂಮಿಯುಂ ಪೊತ್ತಗಜರಾಜಿ
ಯುಡುಗದಿರದೆನೆ ಫಣಿಪ ನಡುಗದಿರನೆನೆ ಕೂರ್ಮನೊಡೆಯದಿರದೆನೆ
ಭರದೊಳು ॥೨೮

ಎತ್ತಲುಂ ಪುದಿದರುಣರಜಮಯಂ ಗಜಮಯಂ
ಸುತ್ತಲುಂ ದೈತ್ಯಪ್ರಚಯಮಯಂ ಹಯಮಯಂ
ಮುತ್ತಿರ್ದ ಛತ್ರಚಾಮರಮಯಂ ಸ್ವರಮಯಂ ನೆಗಳ್ವ ನಾನಾವಾದ್ಯದ।
ಬಿತ್ತರದೊಳಿಹ ರಥವ್ರಜಮಯಂ ಧ್ವಜಮಯಂ
ಪೊತ್ತ ಕತ್ತಿಗಳ ದೀಧಿತಿಮಯಂ ಖತಿಮಯಮು
ಮೆತ್ತಿಬಹ ಸಕಲಪರಿಕರಮಯಂ ಶರಮಯಂ ದೈತ್ಯರ ಮಹಾಬಲದೊ
ಳು ॥೨೯

ಬತ್ತಿದುದು ಸಾಗರವ್ರಾತಮಹಿಪನ ಕೊರಲ್
ಪೊತ್ತಿದುದು ಕೂರ್ಮಖರ್ಪರಮಿರದೆ ಬೇಗ ನು
ಗ್ಗೊತ್ತಿದುದು ಜಡಿವ ನಾನಾ ವಾದ್ಯ ನಿಸ್ವನಂ ಬ್ರಹ್ಮಾಂಡದೆಲ್ಲೆಡೆಯೊಳು।
ಸುತ್ತಿದುದು ವೈರಿಭೂಪಾಲರಂ ಭೀತಿ ಬೆಂ
ಬತ್ತಿದುದು ನಾಕಿಗರ ಗಡಿಯ ಠಾಣೆಯ ಮಾಣ
ದೆತ್ತಿದುದು ಸುರಪುರಕೆ ಕಲಿಜಲಂಧರನ ಸೇನಾಸಮೂಹಂ ನಡೆ
ಯಲು ॥ ೩೦

ಕಂಡವರನುಚಿತದಿಂ ಮನ್ನಿಸುತ ಸಲೆ ಭಯಂ
ಗೊಂಡರ್ಗೆ ನಂಬುಗೆಯನೀವುತ್ತ ಮಲೆತರಂ
ದಿಂಡುದರಿವುತ್ತ ವಿದಿರಾದ ದುರ್ಗಂಗಳಂ ಧೂಳಿಗೋಂಟೆಗಳ ಕೊಂಡು ।
ಪೆಂಡಿರಂ ವಸ್ತುಗಳ ತಂಡಂಗಳಂ ಸೂರೆ
ಗೊಂಡು ತದ್ಭೂಪರಂ ದಂಡಿಸಿಯೆ ಪಿಡಿದು ಪ್ರ
ಚಂಡಖಳನಾಯಕನ ದಂಡು ನಡೆದುದು ಸುರರನಂಡಲೆವ ತವಕ
ದಿಂದ ॥ ೨೧

ದಾಳಿಯಿಟ್ಟುದು ದಿಕ್ಕುದಿಕ್ಕಿಗಂದಸುರಬಲ
ಜಾಲಮಗ ವನ ಸಲಿಲ ದುರ್ಗಂಗಳಂ ಬಿಡದೆ
ಕೋಳುಕೊಂಡರ್ ನಾಡೆ ಸೆರೆತುರುಗಳಂಕೊಟ್ಟು ಬಹುಭಯಂಗೊಂಡು
ಗೂಳೆಯಂ ಬಂದುದಮರಾವತಿಗೆ ತಾನದಂ [ಕೂಡೆ ।
ಕೇಳಿ ಖಳರಾಜನ್ಯತಪ್ಪುದಂ ಚಿತ್ತದೊಳ್
ತಾಳಿ ಘನರೋಷಮಂ ಕಂಗಳೊಳ್ ಕಿಡಿಗೆದರಿ ಸುರಪಾಲನಾಕ್ಷಣ
ದೊಳು ॥ ೨೨

ಕರೆಸಿದಂ ಸಕಲದಿಕ್ಪಾಲ ಕಿನ್ನರ ಯಕ್ಷ
ಗರುಡ ಗಂಧರ್ವ ಸಾಧ್ಯೋರಗ ಪಿಶಾಚ ಕಿಂ
ಪುರುಷ ರಾಕ್ಷಸ ಸಿದ್ಧ ಗುಹ್ಯಕಾಪ್ಸರರೆಂಬ ಸಕಲಲೋಕಾಧಿಪರನು ।
ಕರಿ ತುರಗ ರಥ ಪದಾತಸಂದಣಿಯಿಂದೆ
ಸುರಪುರಕ್ಕೆ ಬರಲಿಂದ್ರನಾಗಲಾ ಕಲಿಜಲಂ
ಧರನ ಕೂಡಣಕಲಹಕೇಳಿಯೆನಲಾ ಕ್ಷಣಂ ಸಂಭ್ರಮದಿ ಪೊರಮಟ್ಟುದು
॥ ೨೩

ಆನೆಗಳಗಿಕ್ಕು ರೆಂಚಿಕೆಗಳಂ ತುರಗಪ್ರ
ತಾನಮಂ ಹಲ್ಲಣಿಸು ತೇರ್ಗಳಂ ಪೂಡಿ ತಾ
ತಾ ನೀಡು ಜೋಡುಸೀಸಕಬಾಹುರಕ್ಕೆ ಚಲ್ಲಣಗಳಂ ಬೇಗದಿಂದಂ ।
ನೀನ್ಯೈದು ತಾನ್ಯೈದು ಪರಶು ಗದೆ ಮುಸಲಾಸಿ
ಧೇನುಗಳನೀಪುರದ ಬಾಹೆಗೆ ಜಲಂಧರನ
ಸೇನೆ ಬಂದುದು ತಡೆಯದೇಳೆಂಬ ಗಜಬಜಂ ತುಂಬಿತಮರಾವತಿ
ಯೊಳು ॥ ೨೪

ಅಸಮದಾನವನ ಸೇನಾಸಮುದ್ರಂ ತನ್ನ
ಮುಸುಕಲೈತರೆ ಕಂಡು ಪುರವನಿತೆ ಸೇನೆಯಂ
ಬೆಸಲಾದಳೋ ಪೇಳೆನಲ್ಕೆ ತಂಬಟ ಭೇರಿ ಡೌಡೆಗಳ ರಭಸದಿಂದಂ।
ಅಸಿ ಪರಶು ತೋಮರ ಕಠಾರಿ ಮುದ್ಗರ ಕುಂತ
ಮುಸಲ ಸೆಲ್ಲೆಹ ಬಿಂಡಿವಾಳಂಗಳಂ ತಳೆದು
ಮುಸಕದಿಂದೈದಿದರ್ ಪಟುಭಟರ್ ಪುರಮನಗಣಿತಕೋಟಿಸಂಖ್ಯೆಯಿಂದೆ॥ ೨೫

ಭೂರಿಭೇರಿಗಳ ರಭಸದ ವಂದಿಜನದ ಗಂ
ಭೀರಘೋಷದ ಬಳಸಿ ಜೀಯೆಂಬ ಮನುಮುನಿಗ
ಳೋರಣದ ಕೈಗೊಡುವ ದಿಕ್ಪಾಲಕರ ಪರಕೆಗುಡುವ ಮಂತ್ರಧ್ವಾನದ।
ಚಾರುಚಾಮರ ಛತ್ರ ನಿಚಯದಾಡಂಬರದೆ
ಸಾರವೈಭವದ ಸಂಭ್ರಮದಿಂದೆ ದಿವಿಜಮದ
ವಾರಣವನೇರಿ ನಡೆದಂ ರಣಕೆ ದೇವೇಂದ್ರನತುಳಸುಮ್ಮಾನದಿಂದೆ ॥೨೬

ಜಾತವೇದಂ ತಗರನಂತಕಂ ಕೋಣನಂ
ಯಾತುಧಾನಂ ಮನುಜನಂ ಪಾಶಿ ಮಕರಮಂ
ವಾತನೇಣವನೀಶಸಖನಶ್ವರತ್ನಮುಮನೀಶಾನನುಂ ವೃಷಭನಂ।
ಪ್ರೀತಿಯಿಂದೇರೆ ಸುರ ನರ ಗರುಡ ಗಂಧರ್ವ
ಜಾತಮುಂ ನಿಜವಾಹನಮನೇರಿ ಮುಂದಸಂ
ಖ್ಯಾತಬಲವೆರಸಿ ದೇವೇಂದ್ರನಿಕ್ಕೆಲದೊಳಗೆ ನಡೆಗೊಂಡುದೇವೇ
ಳ್ವಾಸು ॥ ೨೭

ಬಿಗಿದ ರೆಂಚಿಕೆಯ ಘಂಟಾರವದ ಘನಪತಾ
ಕೆಗಳ ಚಂಚತ್ಕರದ ಗಜರಾಜೆಹಲ್ಲಣದ
ಮೊಗರಂಬಗಳ ಪಕ್ಕರಕ್ಕೆಗಳ ಕಡಿಯಣದ ವಾಜಿಗಳ ವಜ್ರಾಂಗಿಯ।
ಮಿಗೆ ಬಾಹುರಕ್ಕೆಗಳ ಸೀಸಕದ ಕೈಯ ಕೈ
ದುಗಳ ಕಾಲಾಳಂಬುದುಂಬಿ ಸಾರಥಿಯ ಚಾ
ರಿಗೆ ಬರ್ಪ ಚಿನ್ನದ ವರೂಥಂಗಳೈದಿದುದುವು ಸುರಸೈನ್ಯದೆಲ್ಲೆಡೆ
ಯೊಳು ॥ ೨೮

ಬಂದುದಿವಿಜೇಶ್ವರಂ ಸಕಲಸುರನಾಯಕರ
ಸಂದಣಿಯ ಸಂರಂಭದಿಂದಲಮರಾವತಿಯ
ಮುಂದಣ ವಿಶಾಲವಾಗಿರ್ದ ಬಯಲೊಳು ಬಹಳ ಸನ್ನಾಹವಾಗಿ ನಿಂದು।
ಹಿಂದೆಮುಂದೆಡಬಲದೊಳೆಲ್ಲಿಯುಂ ನೆರೆದಬಲ
ವೃಂದವಂ ನೋಡಿ ವಿಸ್ಮಿತನಾಗಿ ಇದರೊಡನೆ
ನಿಂದು ಕಾದುವ ವೀರನಾವನೆನುತೊಡ್ಡಿದಂ ಪಾಜನತಿವಿಸ್ತರ
ದೊಳು ॥ ೩೯

ಇಂತೆಸೆವ ಚೆನ್ನಬಸವೇಶ್ವರ ಪುರಾಣವಂ
ಸಂತಸದಿ ಬರೆದವರ್ಗೋದಿದರ್ಗರ್ಥವಾ
ದ್ಯಂತವುಂಬಿಡದೆಪೇಳ್ದವರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ।
ಸಂತತಂ ಸಕಲಸುಖವಂ ಸಕಲಭೋಗವನ
ನಂತ ಸೌಭಾಗ್ಯವಂ ಕೊಟ್ಟುರಕ್ಷಿಸುವನಾ
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದಂ ॥ ೪೦

ಎರಡನೆಯ ಕಾಂಡದಲ್ಲಿ ೧೨ನೆಯಸಂಧಿ ಮುಗಿದುದು.

---

## ೧೩ನೆಯ ಸಂಧಿ.

ಸೂಚನೆ॥ ಸ್ವರ್ಗದರಸಿನ ಕೊಡೆ ಕಾದಿ ಖಳರಾಜನಾ
ದುರ್ಗಮಂ ಸೆಳೆದುಕೊಂಡಾಕ್ಷಣಂ ದಿಕ್ಪಾಲ
ವರ್ಗಮಂ ಬೆಂಬತ್ತಲೋಡಿ ವಿಧಿಸಹಿತ ವೈಕುಂಠಮಂ ಪೊಕ್ಕರಾಗ ॥

ಎರಗಿದ ವಿರೋಧಿಖಳರೆರೆಯುರಂ ಸಮರದೊಳ್
ತರಿವ ಸುರರಾಲಯದೊಳುರೆ ಮಹಾಲಕ್ಷ್ಮಿಯುಂ
ಸೆರೆಗೈದು ಭಕ್ತರ್ಗೆ ನೆರತೆಯಿಂ ಕರುಣದಿಂ ಕರೆದು ಕರೆದುಂ ಮಾಣದ।
ಹರಿದಲೆಯ ಕೈಯಬೊಬ್ಬಿರಿವ ರುಂಡದ ಕೊರಳ
ಹೆರೆಯ ಸೂಡಿದ ಜಡೆಯ ಮಿರುಪ ಮರಿವಾವುಗಳ
ತುರುಗಲಿಂದೊಪ್ಪುತಿಪ ಕರೆಗೊರಲ ಪಂಪಾವಿರೂಪಾಕ್ಷ ಸಲಹೆ
ಮ್ಮನು ॥ ೧

ವಿವರಿಸುವೆನಾಲಿಸೆನ್ನೆಲೆ ರಾಮ ಬಳಿಕಲಾ
ದಿವಿಜೇಂದ್ರನತುಳಸನ್ನಾಹದಿಂ ಬರುತಿರಲು
ತವೆ ಕಾಣಿಸಿತು ಜಲಂಧರನ ಸೈನಿಕವತ್ತಲದ್ಭುತಾಕಾರವಾಗಿ ।
ಜವನ ಜಂಗುಳಿಯಂತೆ ಮಿತ್ತುವಿನ ಪಡೆಯಂತೆ
ಭವನ ಕಣ್ಣುರಿಯಂತೆ ಭೈರವನ ಬಲದಂತೆ
ತವಕಿಸುವ ಸಿಡಿಲವಂಗಡದಂತೆ ಬರುತಿರ್ದುದೇನೆಂಬೆನಚ್ಚರಿಯನು ॥೨

ಭೋರ್ಗರೆದವೀರ್ಬಲದ ವಾದ್ಯಂಗಳುಭಯಸುಭ
ಟರ್ಗಳಾರ್ಭಟಿಸಿ ತೋಳ್ವೊಯ್ದು ಪಟುಭಟವಾಜಿ
ವರ್ಗಮುಂ ರಾವ್ತರಡ್ಡಾಡಿದರ್ ತೀಡಿದರ್ ಬಿಲ್ಲವರ್ ಸಿಂಜಿನಿಯನು ।
ತೀರ್ಗಳಗ್ರದಪಟಂಕೈವೀಸಿ ಕಾಳಗದ
ವರ್ಗಳಂಕರೆವಂತೆ ಚರಿಸಿದುವು ತತ್ಕ್ಷಣಂ
ಸ್ವರ್ಗದರಸಿನ ಜಲಂಧರನ ಸೇನೆಗಳೊಂದನೊಂದು ಸಂಧಿಸುವಾಗಳು ॥೩

ಗಗನಚುಂಬಿತ ಸದ್ಧ್ವಜಾಳಿಗಳ ಧೂಳಿಗಳ
ಝಗಿಝಗಿಪ ಕಾಂಚನರಥಾವಳಿಯ ಗಾವಳಿಯ
ಮಿಗುವ ತುರಗವ್ರಜದ ಸಂದಣಿಯ ಗೊಂದಣಿಯ ಕರಿಘಟೆಯ ಭರವಸೆ ದೊಳು ।
ವಿಗಡಪಟುಭಟಮನದ ಖಾತಿಗಳ ಹೇತಿಗಳ
ಮಿಗೆ ಮೊರೆವ ಬಹುವಿಧದ ಭೇರಿಗಳ ಭೂರಿಗಳ
ಬಗೆಬಗೆಯ ಛತ್ರಚಮರಾಳಿಗಳ ಪಾಳಿಗಳ ಬಲಮೆರಳ್ ಕಣ್ಗೆಸೆದುವು ॥೪

ಭೋರೆಂದವಖಿಳ ಸುರದುಂದುಭಿಗಳೊರಲ್ವ ಕಹ
ಳಾರವಂ ಪರ್ಬಿದುದು ಬಲಯುಗದ ಕೆಂಧೂಳ್
ಪೋರಾಟಮಾಯ್ತನಂತರಮುಭಯಭಟರನಿಷ್ಠುರದೃಷ್ಟಿಗಳ್ಪೋರ್ದುವು।
ಸೇರಿ ತಿವಿದಾಡಿದರ್ ಚಟೂಣಿಗರ್ ಸೆಲ್ಲೆಹ ಕ
ಠಾರಿ ಕಕ್ಕಡ ಪರಶು ಮುಖ್ಯಾಯುಧಂಗಳಿಂ
ಭಾರಿಯಾಹವಮಾಯ್ತು ದೇವಾಸುರರ್ಗೆ ಆಗಳೇನೆಂಬೆನಚ್ಚರಿಯನು ॥ ೫

ಕಡಿ ಕೊಚ್ಚು ತಿವಿ ತಾಗು ಕೂಗು ಬೊಬ್ಬಿರಿ ಯೆಲುವೆ
ನುಡಿ ಕೆಡುಪ್ರ ಕರುಳನುಗಿ ಬಸುರ ಬಗಿಯುರುಬು ತೋ
ಳ್ಪೊಡೆಯೆತ್ತು ಮುತ್ತು ಕುತ್ತುಡಸು ಬೈ ಪೊಯ್ ನೂಂಕು ತಾಂಕು ಸೀಳ್
ತಡೆ ಯೆನುತ್ತ ।
ಕಡಿದಾಡಿದರ್ ಕತ್ತಿ ಕೈದುವಿಂ ಗದೆಗಳಿಂ
ಬಡಿದಾಡಿದರ್ ಮೊದಲೆಯು ಮಾತಿನಿಂದೆ ಬಾ
ಯ್ಬಡಿದಾಡಿದರ್ ಸುರಾಸುರರ ಚೂಣಿಯು ಸುಭಟರೇನೆಂಬೆನದ್ಭುತವನ
॥ ೬

ತರಿವರಿರಿವರ್ ಕೊಯ್ವರೊತ್ತುವರ್ ಮುತ್ತುವರ್
ಕೊರೆವರುಡಿವರ್ ಕಡಿವರುಬ್ಬುವರ್ ಕೊಬ್ಬುವರ್
ಮುರಿವರೇಳ್ವರ್ ಬೀಳ್ವರುರುಬುವರ್ ಕರುಬುವರ್ ಸಾಹಸವನು ।
ಮೆರೆವರಿಸುವರ್ ಕುಸಿವರಳ್ಕುವರ್ ಬಳ್ಕುವರ್
ತೊರೆವರಂಗವನೊತ್ತಿ ನೂಂಕುವರ ತಾಂಕುವರ್
ಕುರಿದರಿಯುಮಾಡಿಪೊಯ್ದಾಡುವರ್ ಮಾಡುವರ್ ಪೌರುಷಮನುಭಯಭ
ಟರು ॥ ೭

ಪೋಳ್ದರಂಗಂಗಳಂ ಮೊದಲೆಯು ನುಡಿಗಳಂ
ಕೇಳ್ದರೊಬ್ಬೊಬ್ಬರಂ ಮೆಟ್ಟಿ ಸರಿ ಸೀಳಾಗಿ
ಸೀಳ್ದರಿಟ್ಟಣಿಸಿದರ್ ತಣಿಸಿದರ್ ಭೂತಮಂ ಬಹಳಕೋಪಾಂಬುಧಿಯೊಳು
ಆಳ್ದರಿರಿದೇರ್ಗಳತಿವೇದನೆಯು ಮುಸುಕಮಂ
ತಾಳ್ದರಿದಿರಾದವರ ತಲೆಗಳಂತಂದು ತಂ
ಮೊಳ್ದಂಗೆ ಸಲೆನಿವಾಳಿಸಿದರುಭಯಭಟರದೇನೆಂಬೆನಾಕ್ಷಣದೊಳು ॥ ೮

ವಾರ್ಧಿಗಳ ಬಲ್ದೆರೆಗಳೊಂದೊಂದನಳಿವಂತೆ
ದುರ್ಧರದ ರಾವ್ತರಿರಿದಾಡಿದರ್ ಪಟುವೀರಿ
ನಿರ್ಧೂತರೆನಿಪ ಜೋದರ್ಕಳಂಕುಶಮಿಕ್ಕಿ ಪೋರಿಸಿದರಾನೆಗಳನು ।
ಮೂರ್ದನಿಯ ಮುಸುಕದಿಂ ರಥಿಕರೊತ್ತಿದರಾಧ
ನುರ್ಧರರ್ ಮೊದಲಿಸುತಿಸುವ ಕೈಚಳಕವಂ ನಿ
ರ್ಧರಿಸಲರಿದೆಂಬ ಹದನಾದುದಾ ಕ್ಷಣದೊಳೇನೆಂಬೆನಚ್ಚರಿಯನು ॥ ೯

ಸರ್ಬಸನ್ನಾಹದಿಂ ನೂಂಕಿದುದು ಸುರರ ಚಾ
ತುರ್ಬಲಂ ಖಂಡೆಯಂಗಳ ಖಣಿಕಟಿಸ್ವನಂ
ಪರ್ಬಿದುದು ದಿಕ್ತಟಂಗಳೊಳಾನೆಗಾನೆ ಕುದುರೆಗೆ ಕುದುರೆ ತೇರ್ಗೆ ತೇರು।
ಗರ್ಬದಿಂ ಸುಭಟರ್ಗೆ ಸುಭಟರ್ಗ್ಗದಿರಾಗಿ
ಯೊರ್ಬರೊರ್ಬ್ಬರ್ ಸೆಣಸೆ ಸುರಸುಭಟರಿರಿತಕ್ಕೆ
ವೂರ್ಬಲದ ಚೂಣಿ ಮುರಿದೋಡಿ ಕೂಡಿತು ಜಲಂಧರದೈತ್ಯನಿಹ ನೆಲೆಯನು ॥ ೧೦

ಪಿಂತಿರಿಗಿ ಕಾದಿದರನಿರಿವುತಂ ತರಿವುತಂ
ದಂತಿತುರಗಂಗಳಂ ಪಿಡಿವುತಂ ಜಡಿವುತಂ
ಮುಂತಳರ್ವ್ವಭಟರನರೆಯಟ್ಟುತಂ ಕುಟ್ಟುತಂಮೆಟ್ಟುತಂ ಪೆರ್ಣವೆನು।
ಅಂತರಿಸದುರುಬಿ ತಲೆವೊಯ್ವುತಂ ಬಯ್ವುತಂ
ತಂತಮ್ಮ ವೀರಮಂ ಮೆರೆವುತಂ ಬೆರೆವುತಂ
ಭ್ರಾಂತಿಬಿಡಿಸಿದರಾಗ ರಾಗದಿಂ ಬೇಗದಿಂ ಸುರಭಟರ್ ಪರಭಟರನು ॥೧೧

ಖಂಡಮಯವೆತ್ತಲುಂ ಮುರಿಮುರಿದುಬಿದ್ದ ಕೋ
ದಂಡಮಯವೆತ್ತಲುಂ ಕುಣಿಕುಣಿವ ಮೆರಳುಬಲು
ತಂಡಮಯವೆತ್ತಲುಂ ಸುತ್ತಲುಂ ಪರಿವ ರಕ್ತಾಂಬುವಿನೊಳೋಲಾಡುತ
ರುಂಡಮಯವೆತ್ತಲುಂ ಕಡಿಕಡಿದು ಕೆಡೆದ ವೇ
ತಂಡಮಯವೆತ್ತಲುಂ ತುಂಡಾದ ಘನಗದಾ
ದಂಡಮಯವೆತ್ತಲುಂ ತಾನೆನಿಸಿ ರಣರಂಗಮಿರ್ದುದತಿ ಭೀಕರದೊಳು ॥ ೧೨

ರಕ್ತಪ್ರವಾಹವೂದುದು ರಣಂ ಸಾಹಸವಿ
ರಕ್ತರಾದರ್ ಖಳನ ಚೂಣಿಗರ್ ಸುರಕರವಿ
ಮುಕ್ತಬಾಣೋರಗನ ಬಾಯ್ಗೆ ತುತ್ತಾದುವರಿಭಟರ ಜೀವಾನಿಲಚಯಂ।
ರಕ್ತಿಯುಡಿದುವು ಖಳರಕಾಯದೊಳು ಬಹುಕೋಪ
ರಕ್ತೇಕ್ಷಣಂ ಶುಂಭದಾನವಂ ಕಂಡು ಕಗ
ಯುಕ್ತಭೀಷಣವೂದ ಖಂಡೆಯುಮನುರೆ ಜಡಿದು ಕೈವೀಸಿದಂ ಬಲವನು ॥ ೧೩

ನಡೆ ಜಂಭ ನೂಂಕೆಲೆ ನಿಶುಂಭ ಮುಂಬರಿ ಚಂಡ
ತುಡುಕು ಸೇನೆಲೆ ಖಡ್ಗರೋಮ ತೋರಿಸುನಿನ್ನ
ಕಡುಪನೆಲೆ ವಾಮನ ವಿರೂಪಾಕ್ಷ ಕೈದೋರು ಲೋಮ ಬಲ್ಪೇನಾದುದು?
ವಿಡುಕದಿಹರೇ ದೀರ್ಘಬಾಹು ? ನಿಲ್ವರೆ ಮದಿರ?
ತಡೆವರೇ ನೀಂ ಕಾಲನೇಮಿ ? ಸತ್ವವನೆಲ್ಲಿ
ಮಡಗದಿರಿ ಭಟರೆನುತ ಮೊದಲಿಸಿದಂ ಖಳನ ಸೇನಾನಿ ಶುಂಭನಂದು || ೧೪

ಮೊಳಗಿದುವು ಸಕಲವಾದ್ಯಂಗಳಾರ್ಭಟಿಸಿದರ್
ಖಳರೊರಲ್ದುವು ಕಹಳೆ ಮಿಂಚಿದುವು ಕತ್ತಿಗಳ್
ಸಲೆನೂಂಕಿದುವು ಕುದುರೆಗಳ್ ಕರಿಗಳೊತ್ತಿದುವು ಪಟುಭಟರ್ ಮುಂಬರಿದರು ।
ಖಳನಾಯಕರ್ ಕುಬುಬೆನುತ್ತಾರಿ ಬೊಬ್ಬಿರಿದು
ಮುಳಿದು ನಿಜವಾಹನಂಗಳನುರುಬಿ ನಡೆಸಿದರ್
ಕೊಳುಗುಳದ ಭೀಷಣವನೇನೆಂದು ಬಣ್ಣಿಸುವೆನೆಲೆ ರಾಮ ಕೇಳೆಂದನು || ೧೫

ಖೋ ಯೆಂದು ಖಳರ ಪಡೆ ನಡೆವುದಂ ಕಂಡಿಂದ್ರ
ನೋಯೆಂದು ಬೊಬ್ಬಿರಿದು ಕೆಲಬಲದ ಸಕಲ ಸುರ
ನಾಯಕರನೈದೆ ಕೈವೀಸಿದಂ ಸೂಸಿದಂ ಮೊದಲೆಯ ಮಾತುಗಳನು ।
ಬಾಯಬೊಬ್ಬೆಗಳ ತೋಳ್ವೊಯ್ಲ ಪಟುಭಟರ ಸಮು
ದಾಯದೊಡನಗ್ನಿ ಯಮ ನೈರುತ್ಯ ಜಲಧಿಪತಿ
ವಾಯು ಧನದಾದಿಗಳು ನೂಂಕಿದರು ಭರವಸದೊಳೇನೆಂಬೆನಚ್ಚರಿಯನು || ೧೬

ಸುರಪನಂ ಶುಂಭನಗ್ನಿಯನಿಶುಂಭಂ ದಂಡ
ಧರನನಾವಾಮನಂ ನಿರುತಿಯಂ ಮದಿರನುರೆ
ಶರಧಿಪತಿಯಂ ದೀರ್ಘಬಾಹು ಪವಮಾನನಂ ಖಡ್ಗರೋಮಂ ಧನದನಂ
ದುರುಳಪ್ರಚಂಡನೀಶಾನನಂ ಚಂಡನಿಂ
ತಿರದೆ ಮೊದಲಿಸಿ ಸಮ್ಮುಖವಾಗಿ ತುಳ್ಕಿದರ್
ಶರವರುಷಮಂ ನಭೋಂಗಣಮೆತ್ತ ದೆಸೆಯೆತ್ತ ಸುರಧರಣಿಯೆತ್ತಲೆನಲು || ೧೭

ಕೊಚ್ಚುವರ್ ಪೊಸಮಸೆಯ ಶರಗಳಿಂದಿಸುಗೆಯಂ
ಮೆಚ್ಚುವರು ಹೃದಯದಲಿ ಕೋಪವಂ ಕಣ್ಗಳೊಳ್
ಬಿಚ್ಚುವರ್ ಕಣೆಕಣೆಗಳಿಸುಗೆಗಳ ಮಸಕದಿಂ ಬೃಂದಾರಕರ ನೆಲವನು ।
ಮುಚ್ಚುವರ್ ಬಲದೆಡದೊಳುರುಬುತಿಹ ಸುಭಟರಂ
ಪಚ್ಚುವರ್ ಭೂತವೇತಾಳ ಜನಕೀ ಪರಿಯೊ
ಳಿಚ್ಚಾಡಿದರ್ ಸುರೇಂದ್ರಾದಿ ಸುರನಾಯಕರ್ ಖಳನಾಯಕರ್ ಧುರದೊಳು
॥ ೧೮

ಅಸಿಗಳಿಂದೊರ್ವ ಕುಂತದೊಳೊರ್ವ ನೆಗಳ್ವಪ
ಟ್ಟಿಸಗಳಿಂದೊರ್ವ ಗದೆಗಳೊಳೊರ್ಮೆ ಘನತರದ
ಮುಸಲಂಗಳಿಂದೊರ್ಮೆ ಮುದ್ಗರದಿನೋರೊರ್ಮೆ ಸುರಗಿಯಿಂದೊರ್ವ
ಯೊರ್ಮೆ ।
ಅಸಮಸಂಗ್ರಾಮದೊಳಗಿಂತುಭಯನಾಯಕರ್
ಮಸಕದಿಂ ಪೊಯ್ದಾಡಿದರ್ ಬಿಡದೆಪೊಕ್ಕು ರ
ಕ್ಕಸರಿರಿಯೆ ತರಹರಿಸಲಾರದಾಶಾಧಿಪರು ಬೆಂಗೊಟ್ಟರಾಕ್ಷಣದೊಳು॥೧೯

ಸುರಪನೋಡಿದನಗ್ನಿ ಸಾಗಿದಂ ಪ್ರೇತಪತಿ
ತೆರಳಿದನು ನೈರುತ್ಯ ನಡೆದನಾ ಜಲಧಿಪಂ
ಮುರಿದನನಿಲಂಸರಿದನಭವಮಿತ್ರಂ ನೊಂದನೀಶಾನನಳವಳಿದನು ।
ಉರವಣಿಸಿ ದೈತ್ಯನಾಯಕರೋಡುವಮರರಂ
ಬೆರಸಿದರು ದೊರೆಗಳೇ ಬೆನ್ನೀಯೆ ಚತುರಂಗ
ಮಿರದೆ ತೆಗೆದೋಡುತಿರ್ದುದು ಕೆಟ್ಟುಬಿಟ್ಟು ಕುಟ್ಟುವ ದೈತ್ಯಭಟರು
ರುಬೆಗೆ ॥ ೨೦

ಬಿರುಗಾಳಿ ಬೀಸಿದರೆ ನೊರಜುವಿಂಡದಕಾಂತು
ಮುರಿಯದಿಹುದೇ? ನಿಮಿಷಮಾತ್ರದೊಳು ಸುರಸೇನೆ
ಹರಿಹಂಚುವಟ್ಟು ತಾಯ್ಗಂ ಮಕ್ಕಳಾಗದೊಂದೇಬಾರಿ ಬೆನ್ನಿತ್ತುದು ।
ಇರಿ ಕಡಿ ಪೊರಳ್ಚು ಸೋಲ್ತರ್ ದಿವಿಜರೆನುತಾರ್ದು
ಸರಿಗರಕ್ಕಸರಾನೆಕುದುರೆಸಹಿತೊತ್ತಿ ಕುರಿ
ದರಿಮಾಡಿ ಬಿಡದೆ ಬೆಂಬತ್ತಿದರ್ ಸಾಹಸದೊಳಳೇನೆಂಬೆನದ್ಭುತವನು॥೨೧

ಕಡಿದರೋಡುವ ಭಟರ ಬೆಂಬತ್ತಿ ತಮತಮಗೆ
ಪಿಡಿದರ್ ತುರಂಗಗಜರಾಜಿಯುಂ ಪಂಥಮಂ
ನುಡಿದರಿರಿದೊತ್ತಿದರ್ ಮುತ್ತಿದರ್ ಕುತ್ತಿದರ್ ಮೆತ್ತಿದರ್ ಮೈಗಂಬನು ।
ಉಡಿದರಾಂತವರ ಬಗ್ಗರಿಗಳಂ ದಾನವರ್
ಕುಡಿದರರುಣಾಂಬುವಂ ಶಾಕಿನಿಯರೀಸುರರ್
ಮಡಿದರಂದೋಡಿದರ್ ಬಾಡಿದರ್ ನೀಡಿದರ್ ಕೈದುಗಳನು ॥ ೨೦

ಶಿರವರಿಯಲೆತ್ತಿದ ಕರಾಗ್ರಮಂ ಕಂಡು ಪ
ಲ್ಗಿರಿವುತಂ ಖಡ್ಗಧಾರೆಗೆ ಬೆದರಿ ತಂತಮ್ಮ
ಕರವನೊಡ್ಡುತ ಕಾಲ್ಗೆ ಬೀಳುತಂ ಪುಲ್ಗಚ್ಚಿ ದೈನ್ಯವಚನಂಗಳಿಂದಂ ।
ಶಿರವನುಳುಹಯ್ಯ ನಿನ್ನಯ ಬಸುರಬಂದೆವೆಮ
ಗೊರೆವುದಾಳ್ಗಲಸಮಂ ಮಾಳ್ಪವೆಂದುಸುರಿ ಮೈ
ಗರೆವುತಿರ್ದರ್ ಮಡಿದ ಗಜಹಯಂಗಳ ಮರೆಯೊಳಳವಳಿದು ದಿವಿಜ ಭಟರು ॥೨೩

ಮೊರೆವಬೊಬ್ಬೆಗೆ ರಾವ್ತರಂ ಬಿಸುಟು ವಾಜಿಗಳ್
ಪರಿದಾಡಿದುವು ಮಾವ್ತರಂ ಕೆಡಪಿಯಾನೆಗಳ್
ತಿರುಗುತಿರ್ದುವು ಬಂದುಬಿದ್ದರಮರಾವತಿಯ ಪೇರಂಗಳನಮರಭಟರು ।
ಪುರದಪೆರ್ಬಾಗಿಲೊಳ್ ಕರಿತುರಗಪದಹತಿಯೊ
ಳರೆವುತಿರ್ದುದು ಸುರಪದಾತಿ ಖಳಚತುರಂಗ
ಮುರವಣಿಸಿತುಳದಿರಿದುಕೊಂದು ಬರುತಿರ್ದುದದನೇನೆಂಬೆನದ್ಭುತವನು ॥ ೨೪

ಬಾಗಿಲೊಳ್ ಪೊಗುವೊಡಸದಳಮಾಗಿ ಹರಣಮಂ
ನೀಗಿದರ್ ಕೆಲಬರಿರಿದಾಡಿ ನೋಡುವೆವೆಂದು
ತಾಗಿದರ್ ಕೆಲಬರಾನಗರದಾಳ್ವೇರಿಯೊಳು ನೋಡುತಿಹ ಬಾಲೆಯರನು ।
ಬೇಗನೆಮ್ಮಂ ಸೇದಿಕೊಳ್ಳಿರೆಂದವರ್ಗೆ ತಲೆ
ವಾಗಿದರ್ ಕೆಲರರಿಗಳುರುಬಿಬರೆ ಕಂಡುಪೆ
ರ್ಬಾಗಿಲ್ಗಳಂ ಬೇಗಮುದ್ರಿಸಿದರಾ ಸಮಯದೊಳು ಸುರಪತಿಯ ಸುಭಟರು ॥೨೫

ಪೆರ್ಬಾಗಿಲಂ ಬಂಧಿಸಲ್ಕೆ ಪೊರಬಿದ್ದರಂ
ಗರ್ಬದಿಂದಿರಿದು ತಲೆಯರಿದಾ ಜಲಂಧರನ
ಸರ್ಬಸೇನಾಸಮುದ್ರಂ ಶುಂಭನಾಜ್ಞೆಯಿಂ ಕೋಂಟೆಯಂ ಪತ್ತುತಿರಲ
ಕೊರ್ಬಿನಿಂ ದಿಕ್ಪಾಲರಾಳ್ವೇರಿಯಂ ಪತ್ತು
ತೊರ್ಬರೊಬ್ಬರ ಸಚಾರಿಸುತಾಗ ದಾನವರ
ಪೆರ್ಬಲವ ಕಡಿದಿಳುಪುತಿರಲಸುರರುರುಬಿದರದೇನೆಂಬೆನಚ್ಚರಿಯನು ॥ ೧

ಹರಿಗೆಬಲುಹಗ್ನಿಗಳಲುರಿ ಯಮಂಗುಬ್ಬಸಂ
ನಿರುತಿಗತಿಸಂಕಟಮುಗುಳ್ನೀರ್ ಜಲೇಶಂಗೆ
ಮರುತಂಗೆ ತಲ್ಲಣಂ ಯಕ್ಷಪತಿಗಾಸರೀಶಾನಂಗೆ ಬೆಟ್ಟಿತಾಯ್ತು ।
ಪುರದೊಳಗೆ ಪೊರಗೆ ದೇವಾಸುರರೊಳವರ್ಗೆ
ಪರಿಗಣನೆಯೆಲ್ಲಿಯದು ದಾನವರ್ ತವೆತಮಗೆ
ಪಲಪರಿದು ಮುತ್ತಿದರ್ ಸುತ್ತಿದರ್ ಪತ್ತಿದರ್ ಕೋಂಟೆಯಂ ಸಾ
ಸದೊಳು ॥೨

ಕೂಡೆ ಗಜಬಜವಾಯ್ತು ಮನೆಮನೆಯ ಕದಗಳಂ
ಪೂಡಿದರ್ ಮೈಯ ಬಂಗಾರಗಳನುಗಿದು
ಮರೆಮಾಡಿದರು ಕೈವೆರಳ್ಗಳನೊತ್ತಿಕೊಳುತೆ ಕಳವಳಿಸಿದರ್ ಕಾಪಿ
ನಿಯರ
ಬೇಡಕಳುಹಿದರವರವಸ್ತುವಂ ಕೊಡದಿಂತು
ಮಾಡಬಹುದೇ ಪಾಪಿದೇವೇಂದ್ರ ತಾನೆಲ್ಲಿ
ನೋಡುತಿರ್ಪನೊ ! ಕೆಟ್ಟೆವೆನುತ ಪುರಜನಸವಳಲುತಿರ್ಪ ಸಮನಂತ
ಬೊಳು ॥೨

ಕಂಡರಲ್ಲಲ್ಲಿ ದೊರೆಗಳ್ ವರುಣದಿಕ್ಕಿನೊಳು
ದಿಂಡುವರಿಸುವ ಸುರರಕೋಂಟೆ ಪೋದುದೆನುತ್ತ
ಖಂಡೆಯಂಗಳಕಿತ್ತು ಬಾಯ್ವೊಯ್ದು ಬೊಬ್ಬಿರಿದು ಪರಿದರಿರಿಕಡಿಯೆನುತ್ತ
ಕಂಡುದಿಲ್ಲವೆ ಜೀಯ ಪಡುಗಡೆಯ ಕೋಂಟೆಯಂ
ಕೊಂಡರವರೆಂದು ಸುರರುಲಿಯೆ ಖತಿಯಿಂದಲಾ
ಖಂಡಲಂ ಬಿಟ್ಟಸೂಟಿಯೊಳ್ಳೈದಿದಂ ನೆರೆದ ಮಂತ್ರಿಗಳ ಗಡಣದಿಂದೆ॥೨

ಕಿತ್ತಾಯುಧದೊಳಿಂದ್ರಮುಖ್ಯದಿಕ್ಪಾಲಕರ್
ಕುತ್ತಿದರ್ ಕುಸುರಿದರ್ ತಿವಿದರೊಂದೆಸೆಯೊ
ಳೊತ್ತಿದರ್ ಸುರಭಟರ್ ಪರಭಟರ ಮುಂದಲೆಯ ಪಿಡಿದು ಘನಮುಷ್ಟಿ
ಯಿಂದಂ ।
ನೆತ್ತಿಯಂ ಬಡಿದರುರೆ ಕೂರಂಬಿನಿಂ ಮೈಯ
ಮೆತ್ತಿದರ್ ಬಹಳಭಂಗಂಬಡೆದು ಕದನಮಂ
ನಿತ್ತರಿಸಲಾರದಾಳ್ವೇರಿಯಿಂ ಕೆಡೆದರಗಳೊಳಗಾಗಲಸುರಭಟರು ॥ ೩೦

ಅಸಿತರೊಳು ದಿನಪನಪರಾಂಬುನಿಧಿಗೈದಿದಂ
ದನುಜೇಂದ್ರನತ್ತ ಸೇನಾಸಮುದ್ರಂಬೆರಸು
ಘನವಿಭವದಿಂ ಸುತ್ತಪಾಳೆಯವನಿಳಿವನಿತ್ತಲು ಪುರದೊಳಮರೇಂದ್ರನು ।
ಮನದ ದುಮ್ಮಾನದಿಂ ದಿಕ್ಪಾಲಕರ್ವೆರಸಿ
ಮನೆಗೆಬಂದೇಕಾಂತಭವನದೊಳು ಕುಳ್ಳಿರ್ದು
ತನಗೆ ಕಾಳಗದ ಸಂಕಟವನಮರಾಚಾರ್ಯನೊರೆದಾಗಳಿಂತೆಂದನು ॥ ೩೧

ದುರ್ಗಮಿದುಸಾಮಾನ್ಯವೇ! ಯಿದಂಕಾದಿಹ ಭ
ಟರ್ಗಳೇನಲ್ಪರೇ! ಸಂಗರದಪರಿಕರದ
ವರ್ಗವಿಲ್ಲವೆ! ಶಿವಶಿವಿಂತಪ್ಪುದಂ ನಿಮಿಷಮಾತ್ರದೊಳು ಕೊಂಡರವರು।
ಭರ್ಗನ ಕಟಾಕ್ಷದಿಂದುಳಿದುದಲ್ಲದೆ ಖಳಭ
ಟರ್ಗಳಿಂ ಕಡಿದಿಳಿಪಲೆಮ್ಮಳವೆ ಯಿನ್ನಿಹುದು
ಮಾರ್ಗಮಲ್ತುದಯದೊಳಗಮರಗುರುಬೆ ತರಹರಿಸಬಾರದಿಂನಿಂತೆಂ
ದನು ॥೩೨

ಲೇಸನಾಡಿದೆ ಸುರಪ ಇನ್ನಿರಲು ಖಳರಿಂದೆ
ಗಾಸಿಯಾಗದೆ ಮೋಣಿವೀ ವಸ್ತುವಾಹನ
ಕ್ಕಾಸೆಮಾಡದೆ ಸತ್ಯಲೋಕಕ್ಕೈದುವುದುಚಿತವೆಂದು ಗುರುವಾಡಲೊಪ್ಪಿ।
ವಾಸವಾದ್ಯಖಿಳದಿವಿಜರ್ ತಮ್ಮ ನಿಜರಾಣಿ
ವಾಸಸಹಿತಜನೆಡೆಗೆ ಬರೆ ಕಂಡು ವಿಧಿಪೀತ
ವಾಸನಲ್ಲಿಗೆ ಕರೆಮುತಂದು ಬಿನ್ನವಿಸಿದಂ ನಿಜಕಾರ್ಯಸಂಗತಿಯನು ॥೩೩

ಖಳಜಲಂಧರನೆಂಬವಂ ಪೆರ್ಚಿ ಸ್ವರ್ಗಮಂ
ಸೆಳೆದುಕೊಂಡಮರರಿರ್ದೆಡೆಯು ಭೇದಿಸಲೆಮ್ಮ
ಬಳವಿಲ್ಲಿಗೊಡಗೊಂಡುಬಂದೆಂ ಸುರರಕಾವುದೆನೆ ಹರಿ ಮನದೊಳು ।
ತಿಳಿದಾ ಜಲಂಧರಂ ಹರನಲ್ಲದುಳಿದರಿಂ
ದಳಿವನಲ್ಲೆಂದು ನಿರ್ಧರಿಸಿ ದೂರಂಕೇಳ್ದು
ತಳುವುದಲ್ಲೆಂದು ಹರಿ ಸಕಲಸನ್ನಾಹಮಾಗಿರಲಿತ್ತಲಸುರೇಂದ್ರನು ॥ ೨೪

ಕಾಳಗಕೆ ಸಂವರಿಸಕೊಂಡರಸುರರು ಮೊರೆವ
ಕಾಳಗಳ ಸನ್ನೆಯಿಂ ಪಣಿ ದಿಭಹಯಮವರೂ
ಥಾಳಿಗಳು ನಡೆದುವಾಸಮಯದೊಳು ಚರನೊರ್ವನಸುರಪತಿಯೆಡೆಗೆ ಬಂದು ।
ಪೇಳಲೇನಮರರ್ ಪಲಾಯನವಗೈದರೆನೆ
ಕೇಳಿ ಸಂತೋಷದಿಂ ನಿಜಬಲಂಬೆರಸು ಖಳ
ಪಾಲನಮರಾವತಿಯ ಪುರದ ಸಿರಿಯಂ ನೋಡುತೊಳಪೊಕ್ಕು ಬರುತಿರ್ದನು ॥ ೨೫

ಥರಥರದ ಬಾಗಿಲ್ಗಳೋರಣದ ತೋರಣದ
ಪರಿವಿಡಿಯೊಳೆಸೆವ ಸೌಧಾಳಿಗಳ ಪಾಳಿಗಳ
ಪರಿಖಚಿತ ರತ್ನಗೃಹವೀಧಿಗಳ ವೀಧಿಗಳ ಸಂದಣಿಯ ಪೌರಜನದ ।
ಚರಿಸುವ ಪುರಂಧ್ರಿಯರ ನೋಟಗಳ ಬೇಟಗಳ
ಪರಿರಂಜಿಪಖಿಳಗಜರಾಜಿಗಳ ವಾಜಿಗಳ
ಪರಿಪರಿಯ ಚೆಲ್ವುಗಳ ಸೊಂಪುಗಳ ಪೆಂಪುಗಳ ಸಂಭ್ರಮಂ ಕಣ್ಗೆಸೆದುದು ॥ ೨೬

ಆದರದೊಳಾಪುರದ ಸೊಬಗನೋಡುತೆ ರಾಜ
ಬೀದಿಯೊಳ್ ಬಂದು ಖಳಪತಿ ಸುಧರ್ಮೆಯೊಳತಿ ವಿ
ನೋದದಿಂ ಕುಳ್ಳಿರ್ದು ಪ್ರಜೆಗಳಂ ಕರೆದು ಕಾಣಿಸಿಕೊಂಡುಶುಂಭಗಂದು ।
ಮೋದದಿಂದಂ ಪಟ್ಟಮಂ ಕಟ್ಟಿಯಗ್ನಿಮುಂ
ತಾದ ದಿಕ್ಪಾಲಕರ ದುರ್ಗಂಗಳೆಲ್ಲಮಂ
ಭೇದಿಸುತ್ತವಕೆ ಠಾಣೆಯನಿಟ್ಟು ಹರಿಯ ವಸ್ತುಗಳಂ ವಿಚಾರಿಸಿದನು ॥ ೨

ಚರರಾಗ ಬಿನ್ನವಿಸಿದರು ಜೀಯ ! ಸುರಪತಿಯ
ಪರಮವಸ್ತುಗಳಲ್ಲವಿದೆಕೊ ಚಿಂತಾಮಣಿಯ
ನಿರದೊಯ್ದರೆಂದುಸುರೆ ಕಲಿಜಲಂಧರನೆತ್ತ ಪೋದರೆಂದುಮ್ಮಳಿಸಲು ।
ಕರಕಮಂಡಲುದಂಡಕಾವಿಕಾಷಾಂಬರಂ
ಪರಿರಂಜಿಸಲು ಶುಭ್ರಜೀಮೂತಮಿಳಿಗಿಳಿವ
ಪರಿಯಂತೆ ನಾರದಂ ಕಲಿಜಲಂಧರನ ಮುಂದಿಳಿದನಾಕಾಶದಿಂದಂ ॥ ೩೮

ಏಳ್ದು ಸಿಂಹಾಸನದಿನಾಮುನಿಯ ಚರಣದೊಳು
ಬೀಳ್ದೊಡಾಶೀರ್ವಾದಪೂರ್ವಂ ನೆಗಪಿ ಖಳ
ರಾಳ್ದನರ್ಘಾಸನದೊಳೊಲ್ದು ಕುಳ್ಳಿರ್ದು ನಿನಗೇತಕೀ ಚಿಂತೆಯೆನಲು ।
ಕೇಳ್ದುದಿಲ್ಲವೆ ದಿವಿಜಮಣಿವೆರಸಿ ಸುರಪಂ ತೆ
ರಳ್ದನಾವೆಲ್ಲಿಗೆಂದರಿಯೆವೆನೆ ನಾರದಂ
ಪೇಳ್ದನಾ ವೈಕುಂಠದೊಳಗಿಂದ್ರಮುಖ್ಯಸುರನಿವಹವಂ ಕಂಡೆ
ನೆಂದು ॥ ೩೯

ಆನುಡಿಗೆ ಘುಡಿಘುಡಿಸುತಿಂದ್ರನಂ ಹಿಂದಿಕ್ಕಿ
ತಾನೆಮ್ಮ ಸೆಣಸಿ ಬಾಳ್ದಪನೆ ಹರಿಯೆಂದೊಡನೆ
ದಾನವಾಧೀಶ್ವರಂ ಕೂಚುಮಾಡಿಸಿ ತೆರಳ್ದಂ ಮಹಾವೇಗದಿಂದಂ ।
ಸೇನೆನಡೆದುದು ವಿಷ್ಣುಲೋಕಮಾರ್ಗಂಬಿಡಿದ
ನೇನೆಂಬೆನೈ ರಾಮ ! ಸಕಲಸನ್ನಾಹದಿಂ
ದಾನವಾರಿಯಪುರಸಮೀಪಕ್ಕೆ ಬಂದನದನೇನೆಂಬೆನಚ್ಚರಿಯನು ॥ ೪೦

ಇಂತೆಸೆವ ಚೆನ್ನಬಸವೇಶ್ವರಪುರಾಣಮಂ

* * *

* * *

ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದೆ ॥ ೪೧

ಎರಡನೆಯ ಕಾಂಡದಲ್ಲಿ ೧೩ನೆಯ ಸಂಧಿ ಮುಗಿದುದು.

## ೧೪ನೆಯ ಸಂಧಿ.

ಸೂಚನೆ॥ ವರಜಲಂಧರನೊಡನೆ ಹರಿಯಜೇಂದ್ರಾದ್ಯರುಂ
ಧುರದೊಳಿದಿರಾಗಲವರೆಲ್ಲರಂ ತನ್ನ ನಿಜ
ಪುರಕೆ ಪಿಡಿತಂದು ಸೆರೆಯಿಟ್ಟಖಿಳಲೋಕಂಗಳಂ ಪಾಲಿಸುತಿರ್ದನು ॥

ಗರಳಗಳ ಪರಮಬಳ ವರಸೋಮಧರ ಭೀಮ
ದುರಿತಹರ ಶರಣಪರ ಗಿರಿಜಾಪಹರತಾಪ
ಮುರಮಥನನುತಕಥನ ಸುರರಕ್ಷ ನತಪಕ್ಷ ಖಲದಕ್ಷಯಾಗಶಿಕ್ಷ ।
ಪುರವಿಜಯ ನುತವಿಜಯ ಹರಿಭೂಷ ಜಿತದೋಷ
ಕರಿವೇಶಖಳನಾಶ ಮೃದುಭೂಷ ಗಣಪೋಷ
ಗಿರಿಜೇಶ ಭವಪಾಶಹರ ಹರ ವಿರೂಪಾಕ್ಷ ನಿರಪೇಕ್ಷ ಸಲಹೆಮ್ಮನು ॥ ೧

ಕೇಳ್ದನೀವಾರ್ತೆಯಂ ಹರಿ ಮಹಾಕೋಪಮಂ
ತಾಳ್ದನಂದಖಿಳಸೇನಾತತಿಗೆ ಪಯಣವಂ
ಪೇಳ್ದನಾಗಳು ಸಿಂಹಪೀಠದಿಂ ಹರಿಯಜೇಂದ್ರಾದಿಗಳ ಗಡಣದಿಂದಂ ।
ಏಳ್ದು ನಡೆದಂ ಸಮರಭರನಾಗಿ ಬಳಿಯೊಳುತೆ
ರಳ್ದುದಿಭಹಯರಥಪದಾತಿ ಬಹುಕೋಟಿಸುರ
ರಾಳ್ದನ ಭಟಪ್ರತತಿ ಬೊಮ್ಮನ ಚತುರ್ಬಲಂ ಸಂಗರಕೆ ಸಂಭ್ರಮ
ದೊಳು ॥೨

ಆನೆಗಳಸಂಖ್ಯಾತವೈದಿದುವು ತುರಗಸಂ
ತಾನಂಗಳಗಣಿತಂ ನಡೆದುವಿನಿಬರಮಹಾ
ಸೇನೆಗಳ್ ಗಮಿಸಿದವನೇಕಂಗಳನುಪಮವರೂಥಾಳಿ ಕದಲಿತಂದು ।
ಏನೆಂಬೆನೀಹರಿಯ ಸಮರಭರಮಂ ಕೇಳ್ದು
ದಾನವಾಧೀಶ್ವರಂ ರೋಷಭೀಷಣನಾಗಿ
ತಾನಿರದೆ ವೈಕುಂಠಪುರಕತಿಸಮೀಪದೊಳು ಬರುತಿರ್ದನಾಕ್ಷಣದೊಳು
॥ ೩

ಸಂಧಿಸಿದುದಿರ್ಬಲಂ ಘನಶಧಿಶರಧಿಗಳ್
ಸಂಧಿಸುವ ಮೊಳ್ಕೆಯಿಂ ಪಟುತರದ ಗಿರಿಗಿರಿಗ
ಳೊಂದಾಗುವಂತುಭಯಸೈನಿಕದ ಚೂಣಿಗರ್ ತಾಗಿದರ್ ಭರವೆಸದೊಳು ।
ಒಂದೆಸೆಯೊಳಬ್ಬಾಡಿದರ್ ಬಿಲ್ಲವರ್ ಮತ್ತ
ಮೊಂದೆಸೆಯೊಳರಿದಾಡಿದರ್ ಸಬಳದವರಿಂತು
ಮುಂದುವರಿದಿರಿದಾಡಿ ಮಡಿವುತಿರ್ದರ್ ಪೇಳಲೇನಂದಿನಾಹವವನು ॥ ೪

ಕುದುರೆಗಳ್ ಕುದುರೆಗಳನೊತ್ತಿದುವು ಮುತ್ತಿದುವು
ಮದಗಜವನಾನೆಗಳ್ ತಾಂಕಿದುವು ನೂಂಕಿದುವು
ಪದಚರರ್ ಪದಚರರೊಳುರುಬಿದರ್ ತರುಬಿದರ್ ನಾನಾಯುಧಂಗಳಿಂದಂ ।
ಅಧಟನಿಂ ರಥಿಕರೆಬ್ಬಾಡಿದರ್ ಮಾಡಿದರ್
ಸದಮದದ ಸಮರಮಂ ರಾವುತರ್ ಮಾವುತರ್
ಸದೆದಾಡಿದರ್ ಹತಾಹತಿಗಳಿಂ ಖತಿಗಳಿಂದುಭಯಬಲಮೇನೆಂಬೆನು ॥ ೫

ಆರಿವರ್ ದಿವಿಜನಾಯಕರೊ ? ಶಿವಶಿವ ! ಮಹಾ
ವೀರರೈ ತಪ್ಪಲ್ಲ ತಮ್ಮ ನಗರದಸೂಳೆ
ಗೇರಿಯೊಳ್ ಪಂಥಮಂ ನುಡಿದು ನಿಲ್ಲದ ಮೂಗುಮಾರಿಗಳ್ ನೀವಹುದಲಾ।
ವಾರಿಜಾಕ್ಷನೆ ನಿಮ್ಮ ಹಿಂದಿಕ್ಕಿಕೊಂಬವೈ
ಕಾರಿಗಳ ಕರುಳುಗಳ ತೆಗೆಯೆನುತ ವಿವಿಧಪ್ರ
ಹಾರದಿಂ ಮೂದಲಿಸಿ ಸವರಿದರ್ ದಿವಿಜರಂ ದನುಜರತಿ ಕೋಪದಿಂದಂ ॥೬

ಕಳ್ಗುಡಿಕತನದಿಂ ಬಗುಳದೊಡೆಲವೆಲವೊ ಕ
ಟ್ಟಾಳ್ಗಳೀಕಾಳಗಕೆ ನೀವೀಗ ಪೇರೊಡಲ
ಸೀಳ್ಗಳಂ ರಣಭೂತವೇತಾಳಸಂಕುಲಕೆ ಬಡಿಸುವೆವು ನಿಲ್ಲಿರೆನುತ ।
ಬಾಳ್ಗಳಂ ಝಳಪಿಸುತ ಸುರಭಟರ್ ದನುಜರಂ
ಹೋಳ್ಗಳೆದುಕೊಂಡು ಬರುತಿರೆ ಕಂಡು ಪದಹತಿಯು
ದೂಳ್ಗಳನನಂ ಮುಸುಕೆ ಶುಂಭಧೂಮ್ರಾಕ್ಷಾದಿ ಖಲಭಟರ್ ಮುಂ
ಕೊಂಡರು ॥ ೭

ರಾಕ್ಷಸರ ಸೇನೆಯೊಳ್ ದೊರೆದೊರೆಗಳೈದುವುದ
ನೀಕ್ಷಿಸುತ ದಿವಿಜನಾಯಕರತುಳರೋಷತಾ
ಮ್ರಾಕ್ಷರಾ ಚೂಣಿಗರ ಪಿಂತಿಕ್ಕಿ ಖಳಪತಿಗಳಂ ಕೆಡೆದು ಬೊಬ್ಬಿರಿವುತ |
ಅಕ್ಷಿಗಚ್ಚರಿಯೆಂದೆನಲ್ಕೆ ಲಾಘವಲಕ್ಷ್ಯ
ಲಕ್ಷಣಮಹಾಸ್ತ್ರಂಗಳಿಂದಿಸುವುತಿರಲಾಗ
ಲಕ್ಷೀಣಸತ್ವರೆಚ್ಚಾಡಿದರ್ ದೇವಾಸುರರ್ ಘೋರಸಂಗರದೊಳು ‖ ೮

ತಡೆವರುರುಬುವರೊರ್ಮೆ ಸೈರಿಸದೆ ಪಿಂದಕಡಿ
ಯಿಡುವರೋರೊರ್ಮೆ ಯೊತ್ತುವರೊರ್ಮೆ ರಿಪುಗಳಂ
ಕಡಿವರೋರೊರ್ಮೆ ತಾಗುವರೊರ್ಮೆ ತವಕಿಸುವರೊರ್ಮೆ ಸೈರಿಸುವ
ಬಿಡದೆಜರಿವರದೊರ್ಮೆ ಬಿಂಕದಿಂ ಮಸಗಿ ಬೊ [ರೊರ್ಮೆ |
ಬ್ಬಿಡುವರೊರ್ಮೆ ಬೀಗುವರೊರ್ಮೆ ಪಂಥಮಂ
ನುಡಿವರೋರೊರ್ಮೆ ಖತಿಮಸಗಿ ಕಾದುವರೊರ್ಮೆ ದೇವಾಸುರರ್ ಧುರ
ದೊಳು ‖೯

ಕರದ ಖಂಡೆಯದ ಭೀಕರಭಟರ್ ಮೊದಲಿಸಿ
ಕರೆಕರೆದು ಪಗೆಗಳಂ ಕರಚಮತ್ಕಾರದಿಂ
ಕರಮುರುಬಿ ತರುಬಿ ಪೊಕ್ಕಾವರಿಸಿ ಇರಿದಿರಿದು ಕರಚರಣಮಂ ಖಂ
ಹರಣದಾಸೆಯನುಳಿದು ಹರಿದೋಡುವಹಿತವೋ [ಡಿಸೆ |
ಹರದೊಳಗೆ ಬೇಹಬೇಹರದೈದೆ ಸೆಣಸಿ ಸಂ
ಹರಣಕಾಲದ ಕಾಲಹರನ ಕೋಪದೊಳಿರಿವ ಹರಹನೇಂ ಬಣ್ಣಿಸುವೆ
ನು ‖೧೦

ಇರಿವ ದನಿ ಕರೆವ ಕೋಳಾಹಳಂ ಪಗೆಗಳಂ
ಮುರಿವ ಬೊಬ್ಬಾಟವೊತ್ತುವಕಡುಪು ಮೊದಲೆಗೆ
ಮುರುಕಿಸುವ ಬುದ್ಧಿ ಮಂಚಿಪ ಲಾಗು ತವಕಿಸುವ ಚಿತ್ತಮಾರ್ಭಟಿಸು
ಮೆರೆದುದಮರಾಸುರರ ಥಟ್ಟಿನೊಳ್ ಬಿಡದೆ ಕುರಿ [ವಧಟು
ದರಿದ ಪೆಣಗಳ ಮೊಳಗಳ ಬಸಿಯುಮಿದುಳ ಜುರ್ಪು
ಜುರಿಪ ಪೊಸನೆತ್ತರಿನ ಪೊಳೆಯನಲ್ಲದೆ ಕಾಣೆನಾರಣಾಂಕಣದೆಡೆಯೊ
ಳು ‖೧೧

ಕೋಟೆಯೊಳಗಿರ್ದು ಕಾದುವೊಡಂಜಿ ನಡುವಿರುಳು
ಕೋಟಲೆಯೊಳೋಡಿದನರಿದಿರಾಗಿ ಖಳರ ಪೊ
ಯ್ದಾಟವಂ ಸೈರಿಸದೆ ಬೆಂಗೊಟ್ಟರಮರೇಂದ್ರಂ ಕಾಣುತಮ್ಮ ಭಟರ ।
ಓಟವಂ ಕಂಡಿರೇ ಕವಿವ ದಾನವರ ಬೊ
ಬ್ಬಾಟವಂ ಕಂಡಿರೇ ನೀವೆನಲ್ ಮಾಧವಂ
ತೋಟಿಯಂ ದನುಜೇಂದ್ರನೊಡನೆಸಗಬೇಕೆನುತ ನೂಂಕಿದನು ಮಣಿರಥ
ವನು ॥ ೧೨

ಬಿಡುಗಣ್ಣರಾಳ್ಗಳಂ ಪಿಂತಿಕ್ಕಿ ದನುಜಾರಿ
ನಡೆವುದಂಕಂಡು ಕಾದುವೆ ದೈತ್ಯನಾಯಕರ್
ಸೆಡೆದೋಡಿ ಕಲಿಜಲಂಧರನ ಮರೆಯಂಪೊಗಲ್ಕವನಾಕ್ಷಣಂ ಕನಲ್ದು ।
ನುಡಿದನೀತಂವಿಷ್ಣುವೇ,? ಯೆಮ್ಮೊಳಿಂದುತಾಂ
ತೊಡಕಲ್ಕೆತರ್ಪನೋ? ಲೇಸೆನುತ ಚಾಪಮಂ
ಪಿಡಿದು ರಥವಂ ನಡಿಸೆ ಶಾಙ್ರ್ಗಮಂ ಜೇಗೈದು ಕಮಲಾಕ್ಷನಿಂತೆಂ
ದನು ॥ ೧೩

ಈಸುದಿನವೆನ್ನೊಡನೆ ಕಾಳಗದೊಳಿದಿರಾಗಿ
ಗಾಸಿಯಾಗದ ದೈತ್ಯರಿಲ್ಲ ದನುಜಾರಿಯೆಂ
ಬೀ ಸಘಾಟದ ಪೆಸರನರಿದು ನೀಂ ಬಂದುದಜ್ಞಾನಕೃತವೋ ಸಹಜವೋ ।
ಹೊಸಕವನಾಡದಿರು ನಿನ್ನ ಪೆಸರಾವುದಾ
ವಾಸವಾವೆಡೆ ಪೇಳ್ವುದೆನೆ ದನುಜಪತಿ ಮಂದ
ಹಾಸದಿಂ ನುಡಿದನಬುಜಾಯತಾಂಬಕನೆಂದ ಮಾತಿಗಿವಿರುತ್ತರ
ವನು ॥೧೪

ದಾನವಾರಾತಿಯೆಂದೆಂಬ ಗುಣನಾಮದಿಂ
ನೀನಿರ್ಪುದಂ ಕೇಳ್ದುದಂ ಬಿಡಿಪ ಭರವಸದಿ.
ನಾನೈದಿದೆಂ ಜಲಂಧರನೆಂಬುದೆನ್ನ ಪೆಸರಾ ಸಂಜ್ಞೆ ಮತ್ಪತ್ತನಂ ।
ಈನಿಳಿಂಪೇಶನಂ ಹಿಂದಿಕ್ಕಿಕೊಂಡರುಜೆ
ಗಾನರೆವೆನೌಷಧವನೆನುತ ಹತ್ತಂಬಿನಿಂ [ದನು ॥೧೫
ದಾನವಾರಿಯುನೆಸೆಯಲೆಡೆಯೊಳವೆತಡೆಗಡಿದು ಕಾಮಪಿತನಿಂತೆಂ

ಆರ್ಗಿನಿತುಗುಣವುಂಟು ನಿನ್ನಂತೆ ಬಡಸುರರ
ದುರ್ಗಮಂಕೊಂಡವರನಟ್ಟಿದೊಡೆ ನೀಂಜಗದೊ
ಳರ್ಗಳನೆ ಬಾಡಬನಮೇಲೆ ಕವಿದೈತಪ್ಪ ಕಡಲವೋಲ್ ನಿನ್ನಬರವು
ಮಾರ್ಗಮಲ್ಲರಿಯದೈತಂದೊಡಂ ನಾಂ ತೊಟ್ಟ
ಮಾರ್ಗಣವನಿಳಿಪುವೆಂ ಪೋಗು ಪೋಗದೊಡೆ ಕೆಂ
ನೀರ್ಗಳೊಕುಳಿಗೆ ಸಂವರಿಸಿಕೊಳ್ಳೆನುತ್ತೈದುಬಾಣದಿಂ ಹರಿಯೆಚ್ಚನು ॥೧೬

ನೊಂದನಸುರಂ ಗಾಯದಿಂ ಗಾಯದಿಂ ನೊಂದ
ಪಂದಿಯಂತಾರ್ಭಟಿಸಿ ಚಾಪದಿಂದಂಬುಗಳ
ನಂದವಂ ಪಸರಿಸಿದನಬ್ಬಿನಿಂದೊಂದೆರಳ್ಮೂರುನಾಲ್ಕೈದುನೂರು ।
ಮುಂದೆಸಾಸಿರಲಕ್ಷಕೋಟಿಸಂಖ್ಯೆಗಳೊಳರ
ವಿಂದನಾಭನನೆಚ್ಚನಾತನೀಪರಿಗಣನೆ
ಗೊಂದೆರಳ್ಮಡಿಯಧಿಕವೆಂಬಂತೆ ಕರೆದನಂಬಿನಮಳೆಯನಾಕ್ಷಣದೊಳು ॥೧೭

ಕವಿದುವಿಟ್ಟಣಿಸಿದುವು ನೂಂಕಿದುವು ತಾಂಕಿದುವು
ಜವಗೆಡಿಸಿ ಸೇನೆಯಂ ಮುತ್ತಿದುವು ಕುತ್ತಿದುವು
ರವಿರಥತುರಂಗಮಂ ಚುಚಿದುವು ಕರ್ಚಿದುವು ತಮತಮಗೆ ತಾರಕಿಯನು ।
ಬವಣಿಯಿಂದಂಬರದೊಳುರ್ಬಿದುವು ಪರ್ಬಿದುವು
ಭುವನಂಗಳನಿತರೊಳ್ ಪತ್ತಿದುವು ಸುತ್ತಿದುವು
ಹವಣಿಸುವೊಡರಿದೆನಿಸಿ ಕೆಡಪಿದುವು ಮಡಿಪಿದುವಸುರಭಟರ ಬಾಣಂಗಳು ॥೧೮

ಎಚ್ಚಂಬನೊಡನೊಡನೆ ಕತ್ತರಿಸುವರ್ ಬಳಿ
ಕೆಚ್ಚುಬೊಬ್ಬಿರಿವರೋರೋರ್ವರ ರಥಂಗಳಂ
ಕೊಚ್ಚುವರ್ ಪೊಸರಥದೊಳೈದುವರ್ ಗಾಯದಿಂ ಮೂರ್ಛೆಪರ್ ಚೇತರಿಪರು ।
ನುಚ್ಚುನೂರ್ಗೆಯ್ವರಶ್ವಧ್ವಜವನೊರ್ವೊರ್ವ
ಮೆಚ್ಚುವರ್ ಗಾಯಗಾಯಂಕೆ ರಣಾವೇಶದಿಂ
ನಿಚ್ಚಟದ ಕಲಿಗಳಚ್ಚಾಡಿದರು ಹರಿಜಲಂಧರರಂದು ಸಂಗರದೊಳು ॥೧೯

ವಿಕ್ರಮದೊಳಸುರನಿಸುವಂ ತಚ್ಛರಂಗಳಂ
ಚಕ್ರಿ ಕತ್ತರಿಸುತಿಸುವಂ ಹರಿಯ ಬಾಣಮನ
ನುಕ್ರಮದೊಳಖಿಳಂ ತರಿದೆಸುವನಾಗಳೇ ಖಂಡಿಸುವನಬುಜಾಕ್ಷನು ।
ಈಕ್ರಮದೊಳಚ್ಚಾಡುತಿರಲೊಂದು ಬಾಣದಿನ
ತಿಕ್ರಮಿಸಿ ಹರಿಯೆಚ್ಚಿಸಲ್ ದನುಜನಂದಾಕಾಶ
ಚಕ್ರದೊಳು ರಥವೆರಸಿ ಹಾರಿದಂ ಕೀರಿದಂ ಕೋಪದಿಂ ಬೊಬ್ಬಿರಿ
ವುತ ‖೨೦

ಸಾಹಸವನೇನೆಂಬೆನಾಗಸಕಡದರ್ಪ ಮ
ತ್ತಾಹರಿಯುನಸುರನೊಂದಂಬಿನಿಂದೆಸೆಯೆ ಬಳಿ
ಕೀಹರಿ ವರೂಥಮಂ ಬೆರಸಿ ಗಗನಕ್ಕೈದಲೊರ್ವರುಂ ಧರೆಗಿಳಿಯದೆ ।
ಆ ಹೊಳವ ತೇರ್ ಮಿಂಚು ಬಿಲ್ಲದನಿಮೊಳಗುರವ
ದೇಹರುಚಿಗಳ್ ಪ್ರಳಯಮೇಘಮೆನಲೆಸೆವ ಸರ ।
ಳೂಹಿಸಲ್ ಕಡೆಗಾಣವಳೆಯಾಗಳೆಚ್ಚಾಡುತಿರ್ದರದನೇವೇಳ್ವೆನು ‖೨೧

ಅಂಬರದೊಳೊರ್ಮ್ಮೆ ಕಾದುವರ್ ಧರೆಗಿಳಿವು
ತಂ ಬಿಡದೆಸೆಣಸುವರ್ ಧರೆಯೊಳೊರ್ವರ್ ಗಗನ
ಮಂ ಬರಿಯುತೊರ್ವರಿರದೆಚ್ಚಾಡುವರ್ ಧರೆಯೊಳಿರದೆಸುವರೊರ್ಮ್ಮೆ
ಎಂಬುದೇನಾಜಲಂಧರನತುಳರೋಷದಿಂ [ಯೊರ್ಮ್ಮೆ ।
ದಂ ಬಳಿಕ ಮೂಡಿಗೆಯೊಳಾಯ್ದುರಸಿ ಪಾವಕಕ
ಳಂಬಮಂ ಪೂಡಿತೆಗೆದೆಚ್ಚನಿರೇಳ್ಜಗಂ ಶಿಖಿಯ ಸವಿದುತ್ತಾಗಲು ‖೨೨

ಎರಡುಬಲದಾಸ್ಯಮುಂ ಕಂದಿದುವು ಕುಂದಿದುವು
ಕರಿತುರಗಮುರಿಯೊಳೊಕ್ಕಾಡಿದುವು ಬಾಡಿದುವು
ಪರಿವತೇರ್ಗಳ್ ಸಂಪ ಮುಗ್ಗಿದುವು ತಗ್ಗಿದುವು ಪಟುಭಟರ ಧೈರ್ಯಂ
ಸುರರ ಹರುಷಂಗಳುಂ ಸಾಗಿದುವು ಬೀಗಿದುವು [ಗಳುಂ ।
ಕರದಾಯುಧಂಗಳುಂ ಕರಗಿದುವು ಕೊರಗಿದುವು
ಹರಿಗೆ ಹಲಗೆಗಳುರದು ಹಾರಿದುವು ಕೀರಿದುವು ಸೆಗಳಿಯಿಂ ಭೂತಂ
ಗಳುಂ ‖೨೩

ಕಂಡಾಜಲಂಧರನ ಚಾಪದಿಂದೈತಪ್ಪ
ಚಂಡಶಿಖಿಬಾಣಮಂ ಶರಧಿಯಿಂದುಗಿದು ಕೋ
ದಂಡದೊಳ್ ತೊಡಿಸಿ ವರುಣಾಸ್ತ್ರಮಂ ನಿಜಸೇನೆಗಭಯಕರಮಂ ತೋ [ರುತ ।
ಪುಂಡರೀಕಾಕ್ಷನಿಸೆ ತುಂಬಿದುದು ವಾರಿರಣ
ಮಂಡಲದೊಳಲ್ಲಿಯುಂ ನೀರಾಟವಾಡಿದುವು
ಶುಂಡಾಲ ತುರಗ ಸಂದೋಹಂಗಳಾಕ್ಷಣಂ ಪೇಳಲೇನಚ್ಚರಿಯನು ॥೨೪

ಕೆರಳ್ದುರಗಬಾಣದಿಂ ಖಳನಿಸಲ್ ಮಾಧವಂ
ಗರುಡಾಸ್ತ್ರದಿಂ ತರಿದನದ್ರಿಬಾಣದಿನಿಸಲ್
ವರವಜ್ರವಿಶಿಖದಿಂ ಖಂಡಿಸಿದನಿನಕಳಂಬದಿನಂಧಕಾರಶರಮಂ ।
ಪರಿಹರಿಸಿದಂ ಹರಿಬಳಾಹಕಾಸ್ತ್ರದಿನಿಸಲ್
ಮರುತಾಸ್ತ್ರದಿಂದದಂ ತೊಲಗಿಸಿ ಜಲಂಧರನ
ಕರದ ಕಾರ್ಮುಕವನಿಕ್ಕಡಿಮಾಡಿ ಸೂತರಥತುರಗಗಳ ಖಂಡಿಸಿ
ದನು॥೨೫

ತುರಗರಥಸಾರಥಿಗಳಂ ತುಂಡಿಸಲ್ ಕೋಪ
ಭರಿತಮಾನಸನಾಗಿ ಕಾಯ್ದ ಕೇಸರಿಯಂತೆ
ಭರದಿನಾರ್ಭಟಿಸಿ ದೇವಾಸುರರ್ ಬೆರಗಾಗಿ ನೋಡುತಿರೆ ಪಾಯ್ದು ಹರಿಯ।
ವರವರೂಥಮನೆತ್ತಿ ಕರಯುಗಳದಿಂ ನಭಕೆ
ತಿರುಪಿಡಲ್ ನಿಡುಬೊಗರಿಯಂತೆ ಹರಿ ನಭದಿಂದೆ
ಧರೆಗಿಳಿದು ಪೊಸರಥದೊಳ್ಳೈತರಲ್ ಮಗುಳಟ್ಟಿ ಖಳನಿರದೆ ಬೊಬ್ಬಿರಿ
ದನು ॥೨೬

ಅಡರುವನು ಹರಿಯೊಂದುತೇರನಸುರಂ ಕನ
ಲ್ದಿಡುವನದನಿಂತುಟಪ್ಪತ್ತೊಂದುಸೂಳ್ವರಂ
ಬಿಡದಂಣಿಕಲ್ಲಾಡುವಂತುಟಂಮಾಲೆಗಳನೊದಗಿನಿಂದಾಡುವಂತೆ ।
ಇಡುವಬಿಡುವುರುಚಮತ್ಕೃತಿ ನೋಡುತಿಪ್ಪೆರಡು
ಪಡೆಗಗೋಚರಮೆನಲು ಕೂಡೆ ಕಮಲಾಂಬಕಂ
ಕಡುನೊಂದು ಕೌಮೋದಕೀಗದೆಯನುರೆ ತುಡುಕಿ ಖಳಪತಿಯೊಳಿಂತೆಂ
ದನು ॥೨೭

ಭಾರಣೆಯ ವಿದ್ಯವುಂ ಸಮರದೊಳ್ ತೋರದೊಡೆ
ಧೀರರೇಂ ಮೆಚ್ಚುವರೆ? ಮಧುಕೈಟಭಾದ್ಯಖಿಳ
ವೀರರಂ ಸದೆದುದೀ ಗದೆ ಯಿದರ ಸವಿಯ ನೀನೊಮ್ಮೆಯುಂ ಕಂಡರಿ
ಹಾರದೆಡಬಲನನುನ್ನತ ಗದಾದಂಡದಿಂ [ಯಲಾ।
ದೀ ರಣದೊಳದಿರಾಗು ಕಾಣಬಹುದುಭಯಬಲ
ವೀರಪ್ರವೀಣತೆಯನೆನುತೆ ಹರಿನುಡಿಯಲಾ ಖಳನಿರದೆ ಗದೆಗೊಂ
ಡನು ॥೨೮

ಕಸ್ತೂರಿ ಜವಾದಿ ಕುಂಕುಮವಾದಿಯಾಗಿಹ ಸ
ಮಸ್ತ ಪರಿಮಳವನಣ್ಪಿಟ್ಟು ಮುಖಕಮಲವಿ
ನ್ಯಸ್ತಕರ್ಪೂರತಾಂಬೂಲಶೋಭಿತರಾಗಿ ನಿಜಗದೆಗಳಂ ತಿರುಪುತ।
ಮಸ್ತಕದ ಮಣಿಮಕುಟದೊಲಹುಗಳ ಭೂಷಣಗ
ಭಸ್ತಿಗಳ ಹರಿಜಲಂಧರರಾಗ ರಾಗದಿಂ
ವಿಸ್ತೀರ್ಣವಾದ ರಣರಂಗದೊಳು ನೋಳ್ಪರ್ಗೆ ಬೀರಿದರ್ ಕೌತುಕ
ವನು ॥೨೯

ಉಡಿನಡುವುರಂ ಪಾರ್ಶ್ವ ಮೆಸೆವ ತೋಳ್ಕೈಂಕುಳಂ
ಮುಡುವುಕೊರಲಾನನಂ ಚಾರುಮಣಿಮಕುಟಂಗ
ಳೆಡೆಯೊಳಾಡಿದುವುಭಯವೀರರ ಗದಾದಂಡಯುಗಳಂಗಳಾಕ್ಷಣದೊಳು।
ಅಡಗದಾವೇಶವುಬ್ಬರಿಪ ಮುದವೊಡನೆ ಮೈ
ಗೊಡದ ವಂಚನೆ ಪೊಯ್ವಕೈಚಳಕಗಳ ನೋಳ್ಪ
ಪಡೆಯೆರಡಕಾಶ್ಚರ್ಯಮಂ ಮಾಡಿ ಪೊಯ್ದಾಡಿದರ್ ಕಲಿಗಳಾಹವೆ
ದೊಳು ॥೩೦

ಇಂತು ನಾನಾಕುಶಲದೊಳು ಗದಾಯುದ್ಧದಿಂ
ದಂ ತನಗೆ ಗೆಲವುಗಾಣದೆ ಮಹಾವಿಷ್ಣುವತಿ
ಚಿಂತಿಸುತ ಕಲಿಜಲಂಧರನೊಳಂದಗ್ಗಳಿಕೆ ತಗ್ಗೆ ಭುಜಸತ್ವದಿಂ।
ನಿಂತು ನೀಂಮಲ್ಲಗಾಳಗದೊಳನಗಿದಿರಾಗ
ಲಂತಾಗ ಕಾಣಬಹುದೆನೆ ಖಳಂ ನಸುನಗುತ
ತಾಂ ತಡೆಯದಾ ಗದೆಯನುಳಿದು ತೋಳ್ವೊಯ್ಯುತಂ ಪೊಡೆಯಲರಗಿಂ
ತೆಂದನು ॥೩೧

ಪಕ್ಷಿವಾಹನ ವೃಥಾಮುಷ್ಟಿಯುದ್ಧದೊಳು ಕಾ
ಲಕ್ಷೇಪವೇಕೆ ? ಬಾರೆನುತ ಬೊಬ್ಬಿರಿದು ಕಮ
ಲಾಕ್ಷಂಗೆ ಕೈಗೊಟ್ಟನಸುರಪತಿದಿಗ್ಗಜಂ ದಿಗ್ಗಜಕೆ ಕೈಗೊಡುವೊಲು ।
ಕಕ್ಷ ಕಂಧರ ಭುಜದ್ವಯ ಪಾರ್ಶ್ವ ಕಟಿ ಮಧ್ಯ
ವಕ್ಷಸ್ಸು ಜಾನು ಜಂಘೋರು ಗುಲ್ಫಾಂಘ್ರಿಗಳೊ
ಳಾಕ್ಷಣಂ ಪಿಡಿವ ಬಿಡಿಸುವ ಬಿನ್ನಣಂಗಳವರೀರ್ವರೊಳು ಸೊಗಯಿಸಿ ದುವು ॥೨೧

ಸಿಕ್ಕುವಂ ಹರಿಯೊಮ್ಮೆಯೊರ್ಮೆ ಖಳಪತಿ ಹರಿಯು
ಡೊಕ್ಕರಕ್ಕೊಳಗಪ್ಪನೊರ್ಮೆ ವಂಚಿಸುತವೊಳ
ಪೊಕ್ಕು ಹರಿಯುಂ ಪಿಡಿವನೊಮ್ಮೆ ಕಮಲಾಂಬಕಂ ಚಿಮ್ಮಿ ಕಡುಲಾಗಿ ನಿಂದೆ ।
ಮಿಕ್ಕುತಪ್ಪುವನೊಮ್ಮೆ ಮಿಂಚಿಹೊಳವಂದದಿಂ
ರಕ್ಕಸಂ ಜುಣುಗುವಂ ಪೇಳಲೇನಿರ್ವರಬ
ಲಕ್ಕಿರ್ವರಾರುರವಣೆಗೆ ಯಿರ್ವರಚನುತಾಕ್ಕರಕೀರ್ವರೇ ಸಾಟಿ ಯೆನಲು ॥೨೨

ಕರವಳಯದಿಂದೆ ಬಂಧಿಸುವ ತಳಹತ್ತದಿಂ
ದುರವಣಿಸ ಮಿಗೆದುವಂಗುಲದಲೊತ್ತುವ ಮೇಲೆ
ವರಶಿರೋವಳಯದಿಂ ಸಿಲ್ಕಿಪರ್ ತೋರಹತ್ತದಿಂ ತವಕದಿಂ ಹಿಡಿವರು
ಉರಗಬಂಧನದಿಂದವೊತ್ತುವ ಸಘಾಟವಾ
ಹರಿಜಲಂಧರರೊಳತಿ ಪಿರಿದಾಗಿ ಖಳನಿರದೆ
ಹರಿಯುನೊಳಪೊಕ್ಕು ಹಿಡಿದಂ ತನ್ನ ಭುಜಸತ್ವದಿಂದಲದನೇನೆಂಬೆನು ॥೨೪

ಬೀಸಿಬಿಡೆ ಮಾಧವಂ ಭೂತಳಕೆ ಬಿದ್ದು ಮಿಗೆ
ಗಾಸಿಯಾದಂ ದೇಹಬಲಮಳಿದುದುರೆ ಮನದ
ವಾಸಿ ಪೈಸರವಾಯ್ತು ಗೆಲ್ವಾಸೆಯುಡಗಿತಾಲಸ್ಯವೆಡೆಗೊಂಡುದಾಗ ।
ವಾಸವಾದ್ಯಮರತತಿಯುಳ್ಳುತಿರ್ದುದು ಪೀತ
ವಾಸನೊಂದಾನೊಂದುಪಾಯದಿಂದಂ ಮಂದ
ಹಾಸದಿಂದಾ ಕಲಿಜಲಂಧರನ ಕೂಡೆ ವಿನಯೋಕ್ತಿಯಿಂದೆಂತೆಂದನು ॥೨೫

ಮೆಚ್ಚಿದೆಂ ದೈತ್ಯಪತಿ ನಿನ್ನಯ ಪರಾಕ್ರಮಕೆ
ನಿಚ್ಚಟದ ವರವದೇಂ ಕೇಳೆನೆ ಖಳಂ ನಗುತೆ
ಕುಚ್ಚಿತದೆ ಗರುವ ಮಧುಕೈಟಭಾದ್ಯರ ಗೆಲ್ದ ತೆರನಲ್ಲಮೀಗ ನೀನು ।
ಮೆಚ್ಚಿದೊಡೆ ಲೇಸು ನಿನ್ನ ರಸಿಸಹಿತೆಮ್ಮನೆಯೊ
ಳೊಚ್ಚತಂ ಬಂದು ಸೇರೆಯಿರಿ ಯೆನಲ್ ಕೇಳ್ದು ಬಳಿ
ಕಚ್ಚುತಂ ಖಳನಿವಂಬಿಡುವನಲ್ಲೆಂದು ಸಿರ್ಧರಿಸಿದಂ ಮನದೊಳಂದು॥೩೬

ಇಂತೆಂದು ಕಲಿಜಲಂಧರನೆಂದ ಮಾತಿಗಾ
ಕಂತುಪಿತ ಕಮಲೆಯುಂ ಕೈಕೊಂಡು ಖಳನ ರಥ
ಮಂ ತಡೆಯದೇರಿದರ್ ಕಮಲಾಸನೇಂದ್ರಾದಿ ಸಕಲಬೃಂದಾರಕರನು ।
ಸಂತೋಷದಿಂ ಪಿಡಿದುಕೊಂಡು ಜಯದುಬ್ಬಿನಿಂ
ತಾಂ ತಿರುಗಿದಂ ತನ್ನಪಟ್ಟಣಕೆ ನಾನಾದಿ
ಗಂತಮಂ ವಾದ್ಯರವವಳ್ಳಿರಿಯೆ ನಿಖಿಳಸೇನಾತತಿಯ ಗಡಣದಿಂದಂ॥ ॥೩೭

ಗುಡಿತೋರಣದ ರಚನೆಯಿಂದೊಡನೆ ಕಳಶ ಕ
ನ್ನಡಿವಿಡಿದು ಬಾಲೆಯರ ಸಾಲ್ಗಳಿಂದರಮನೆಗೆ
ಸಡಗರದೊಳೈತಂದು ಸಿರಿವೆರಸಿ ಹರಿಯನೊಂದರಮನೆಯೊಳಿರಿಸಿ ಬಳಿಕ।
ಬಿಡದೆ ಶತಕೋಟಿರಕ್ಕಸರ ಕಾವಲನಿಕ್ಕಿ
ಜಡಜಭವ ದಿವಿಜೇಂದ್ರ ಮುಖ್ಯಸುರರಂ ಕರೆದು
ನುಡಿದನೆಲ್ಲರುಮೆನ್ನ ಸೇವೆಯುಂಮಾಡಿಕೊಂಡಿರಿ ಯೆನಲುಕೈಕೊಂ
ಡರು ॥೩೮

ಕಮಲಜಂ ಮಂತ್ರಾಕ್ಷತೆಯನೀವನಸುರಂಗೆ
ಸುಮನೋಧಿಪತಿಮುಖ್ಯಸಕಲ ವೃಂದಾರಕರ್
ತಮತಮಗೆ ಪೇಳ್ದಾಳಿಗಂಗಳಂ ಮಾಡಿಕೊಂಡಾ ಖಳನ ಚಿತ್ತವರಿದು ।
ಕ್ರಮದೊಳಿರ್ಪರ್ ಶಿವನಕೈಲಾಸವೊಂದಲ್ಲ
ದಮರಾರಿಮಿಕ್ಕಭೂ ಸ್ವರ್ಗಪಾತಾಳಲೋ
ಕಮನೆಲ್ಲಮಂ ವಶಂಗೆಯ್ದು ಸಕಲೈಶ್ವರ್ಯದಿಂದೆ ಬಾಳುತ್ತಿರ್ದನು ॥ ೩೯

ಇಂತು ಮೂರರ್ಬುದಾಬ್ದಂ ಸಕಲ ಲೋಕಮಂ
ಚಿಂತೆಯಿಲ್ಲದೆ ಪಾಲಿಸುತ್ತಿರಲು ಸಕಲ ಸುರ
ಸಂತತಿಗಳತಿಚಿಂತೆಯಿಂದೆ ಹರಿಯಜರೊಳೊಂದಿನ ಗುಪ್ತದಿಂ ಯೋಚಿಸಿ।
ಎಂತುತಾಳ್ದಪೆವೀತನಲೆಯನಿವನೈಶ್ವರ್ಯ
ಕಂತಮಂ ಕಾಣೆವೆಲ್ಲರ್ ಪೋಗಿ ಪೇಳ್ವವಾ
ಕಂತುಹರಗಾತನಿಂ ಹರಿಯದೊಡೆ ಮರಣಮೇ ಮೌಲ್ಯಧನವೆಮಗೆಂದರು ॥೪೦

ಈತೆರದೊಳಜಹರೀಂದ್ರಾದಿಗಳು ತಮ್ಮೊಳಗೆ
ಮಾತಾಡಿಕೊಂಡೊಂದಿನಂ ರಾತ್ರಿಯೊಳು ಸುರ
ವ್ರಾತಮುಂಬೆರಸು ರಕ್ಕಸರರಿಯದಂತತಿರಹಸ್ಯದಿಂದೈದೆಬಂದು ।
ಸಾತಿಶಯಮಾದ ಕೈಲಾಸಾದ್ರಿಯಂ ಪೊಕ್ಕು
ಭೂತನಾಥಂಗೆ ಸಾಷ್ಟಾಂಗದಿಂದೆರಗಲತಿ
ಪ್ರೀತಿಯಿಂದಭವನವರಂನೋಡಿ ಬಂದುದೇನೆನುತ ಹರಿಯಂ ಕೇಳ್ದನು ॥೪೧

ಎಲೆಮಹಾದೇವ! ಬಿನ್ನಪವನವಧರಿಸೊರ್ವ
ಖಳ ಜಲಂಧರನೆಂಬುವಂ ಪೆಚ್ಚಿ ನಾವಿರ್ದ
ಪೊಳಲುಗಳ ಬಿಡದೆಸಾಧಿಸಿ ಸಮಸ್ತರನಿರದೆ ಪಿಡಿದು ಕೊಂಡೊಯ್ದು [ತನ್ನ ।
ನಿಳಯದೊಳು ಸೆರೆಗೈಯೆ ಬಿಟ್ಟೋಡಿ ಶಿವ! ನಿಮ್ಮ
ಬಳಿಗೆಬಂದೆವು ಕಾವುದೆಂದು ಬಿನ್ನವಿಸಲ್ಕೆ
ತಿಳಿದಾ ಜಲಂಧರನ ಸಂಹರಿಪೆನಂಜಬೇಡೆಂದು ನಂಬುಗೆಯಿತ್ತನು ॥ ೪೨

ಇಂತೆಸವ ಚೆನ್ನಬಸವೇಶ್ವರಪುರಾಣಮಂ

* * * * * * *

* * * * * * *

ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದಂ ।

ಎರಡನೆಯಕಾಂಡದಲ್ಲಿ ೧೪ನೆಯ ಸಂಧಿ ಮುಗಿದುದು.

---

## ೧೫ ನೆಯ ಸಂಧಿ.

ಸೂಚನೆ॥ ವರಜಲಂಧರನತುಳಗರ್ವದಿಂ ಕೈಲಾಸ
ಪುರಕೆ ಧಾಳಿಯನಿಡೆ ಶಿವಂ ಕೇಳ್ದು ಕೋಪದಿಂ
ಧುರದೊಳಾತನ ಶಿರವನರಿದವನ ಜೀವಮಂ ಪಣೆಗಣ್ಣೊಳಡಗಿಸಿದನು ॥

ಶಕ್ರಪಂಕಜಜಾತಚಕ್ರಧರವಿನುತ ಪಾ
ದಾಕ್ರಾಂತಲೋಕ ಘನವಿಕ್ರಮಾಮ್ನಾಯವ್ಯ
ತಿಕ್ರಮಚರಿತ್ರ ದಕ್ಷಕ್ರತುವಿನಾಶ ವಿಲಯಕ್ರೋಧವರವಿನೋದ ।
ಚಕ್ರಿವ್ರಜಾಭರಣ ಶಕ್ರಭವವರದ ಸ
ವ್ಯಕ್ಕ್ಳಪಾಪಾಂಗ ಲೀಲಾಕ್ರಮವಿಲಾಸ ಖಳ
ಶುಕ್ರಶಿಷ್ಯಪ್ರಳಯಶುಕ್ರ ಪಂಪಾವಿರೂಪಾಕ್ಷ ರಕ್ಷಿಸು ಜಗವನು ॥೧

ರಾಮ! ಕೇಳಿತ್ತಲು ಜಲಂಧರಂ ಮರುದಿನಂ
ರಾಮಣೀಯಾಸ್ಥಾನದೊಳು ಸಕಲರಾಕ್ಷಸ
ಸ್ತೋಮವೆರಸೋಲಗದೊಳಿರುತಿರ್ದು ಕೂಡೆ ನಿರ್ಜರರ ಸುಳಿವಂ ಕಾಣದೆ ।
ಭೀಮರೂಪಾಗಿ ದೂತರನಟ್ಟಲವರರಿದು
ತಾಮರಸ[1]ದೃಷ್ಟ್ಯಜೇಂದ್ರಾದಿ ಸುರರಿರುತಿರ್ಪ
ಧಾಮಂಗಳೆಲ್ಲಮುಂ ಶೂನ್ಯಮೆನೆ ಕೇಳಿ ಘುಡುಘುಡಿಸಿದಂ ಖಳ ರಾಜನು ॥೨

ನಾಕ ನರಲೋಕ ಪಾತಾಳಗಳೊಳೆನ್ನಾಜ್ಞೆ
ಯಾಕಪಟದಿವಿಜರಂ ಮರೆಯೊಗಿಸಿಕೊಂಬನೆಂ
ಬಾಕೆವಾಳರನೊರ್ವರಂ ಕಾಣೆನಿವರೆತ್ತಪೋದರೆಂದಸುರಗುರುವಂ ।
ಆ ಕಲಿಜಲಂಧರಂ ಬೆಸಗೊಳಲ್ಕೆಲೆಮರುಳೆ
ಲೋಕನಾಯಕನನಾ ಸಕಲಬ್ರಹ್ಮಾಂಡಗ
ರ್ಭೀಕರನ ಶಿವನ ಶಂಕರನ ಮರೆವೊಕ್ಕರೆನೆ ದೈತ್ಯಪತಿಯುರಿದೆದ್ದನು ॥೩

---

1 ನಯನಜೇಂದ್ರಾದಿ.

ಸೋಜಿಗವನಾಲಿಸಿದೆನೀಗ ನಾನಾಲೋಕ
ರಾಜಿಗಧಿಪತಿಯೊಬ್ಬನುಂಟೆಂಬ ಸುದ್ದಿಯಂ
ಮಾಜುವರೆಯಾನಲ್ಲದಿನ್ನೊಬ್ಬ ಲೋಕನಾಯಕನಿಲ್ಲವೆಂದಿನ್ನೆಗಂ ।
ಆ ಜಯಂಮೊಣ್ದಿರ್ದ್ದೆನ್ನೈಸೆ ಬರಲಖಿಳ ಕರಿ
ವಾಜಿ ರಥ ಭಟರೆನುತ ಸಿಂಹಪೀಠದಿಯಸುರ
ರಾಜನೆದ್ದಂ ಹರವಿರೋಧಮನುಚಿತವೆಂಬ ಗುರುವಚನಮಂ ಬಗೆಯದೆ॥೪

ಧಾಳಿಯಿಟ್ಟುದು ರಜತಶೈಲಕಂದಸುರಜನ
ಪಾಲಕನ ದಂಡು ತದ್ವಾರ್ತೆಯಂ ಕೇಳ್ದೊಡನೆ
ಗೂಳಯಂದೆಗೆದುದಲ್ಲಿಯಜನಂ ಕೈಲಾಸಕಾಗ ಬಹುಬೇಗದಿಂದಂ ।
ಆಲಿಸಿದನಿವರ ದೂರಂ ಜಲಂಧರನೊಡನೆ
ಕಾಳಗಂ ನಮಗೆಂದು ಶಂಕರಂ ನಂದಿಯೊಳ್
ಪೇಳ್ಲಾತಂ ಹರನ ಕಟಕದೊಳು ಪೊಯ್ಸಿದಂ ಡಂಗುರವನಾಕ್ಷಣ
ದೊಳು॥೫

ಎಲೆ ಸಿದ್ಧರಾಮ! ಕೇಳಾಕ್ಷಣಂ ಶಂಕರಂ
ಕಲಹಸನ್ನಾಹಮಂ ಕೈಕೊಂಡು ಬಲದೆಡದೊ
ಳುಲಿವ ವೇದಾವಳಿಯ ಘೋಷದಿಂ ವೃಷಪತಿಯನೇರಿ ಗಣಕುಲಮಾಗಳು।
ಬಳಸಿಬರಲಜಸುರೇಂದ್ರಾದಿಗಳ್ ತಂತಮ್ಮ
ಬಲವೆರಸಿ ಬೆನ್ನೊಳೈತರೆ ವಾದ್ಯಘೋಷಣದ
ಕಳಕಳಂ ದಿಙ್ಮಂಡಲದೊಳಡಿಯೆ ಶಂಭು ಕೈಲಾಸಗಿರಿಯಿಂದಿಳಿದನು॥೬

ದಿಕ್ಕರಿಗಳಂತೈದುತಿರ್ಪಾನೆಗಳ ಘಟೆಗೆ
ಲೆಕ್ಕವಿಲ್ಲಂಬರಕೆಚುಂಬಿಸುವ ಪೊಸಪೊನ್ನ
ಪಕ್ಕರಕ್ಕೆಯ ಹಯಾಳಿಗೆ ಗಣನೆಯಿಲ್ಲಮುನ್ನತ ಮಣಿರಥಪ್ರತತಿಯ ।
ಟಕ್ಕೆಗಳ್ಗವಧಿಯುಸ್ಸಿಲ್ಲ ಕಡುಗಲಿ ಪಾಯ್ದ
ಳಕ್ಕೆ ಕಡೆಯಿಲ್ಲ ದೊರೆದೊರೆಗಳನಿಬರ ಪೇಳ
ಲಕ್ಕುಮೇ ಶಿವಶಿವಾ ವಾದ್ಯನಿರ್ಘೋಷಕೆ ಜಗಜ್ಜನಂ ಕಿವುಡಾದುದು ॥೭

ಥರಥರದೊಳ್ಕೈದುತಿರ್ಪಾನೆಗಳ ಸೇನೆಗಳ
ಪರಿಪರಿವ ಪಟುವರೂಥಾಳಿಗಳ ಪಾಳಿಗಳ
ಕರಧೃತಾಯುಧತತಿಯು ಕಾಲಾಳಮೇಲಾಳ ಸಂದಣಿಯು ಸನ್ನಾಹದ ।
ಮರುತೋಚ್ಚಲಧ್ವಜಪಟಾವಳಿಯು ಗಾವಳಿಯು
ಇರದೆ ಥಾಳಿಪ ಚವರವೊತ್ತುಗಳ ಜೊತ್ತುಗಳ
ಧುರಮನೈದುವ ಸುಭಟರಬ್ಬುಗಳ ಕೊಬ್ಬುಗಳ ಸಂಭ್ರಮಂ ಕಣ್ಗೆಸೆದುದು ॥೮

ನುತಪುಂಡರೀಕವಿಲಸಿತಮಾಗಿ ಕೊಳನಲ್ಲ
ವತುಳಪತ್ರವಿರಾಜಮಾಗಿ ಮರನಲ್ಲ ವಿ
ಶ್ರುತಸೋಮಮಂಗಳಬುಧಾನ್ವಿತಂ ತಾನಾಗಿಯಾಕಾಶವಲಯಮಲ್ಲ ।
ಧೃತಖಡ್ಗಸಂತಾನಮಾಗಿಯುಂ ನಾಡೆಪ
ರ್ವತಮಲ್ಲ ಕೇತುರಂಜಿತಮುಂಗ್ರಹಾಂತ್ಯಮ
ಲ್ಲತಿಘನಸ್ಯಂದನಾನ್ವಿತಮಾಗಿ ವನಮಲ್ಲಮೆನಿಸಿ ಪಡೆನಡೆಗೊಂಡುದು ॥೯

ಥಾಳಿಸುವ ವಿವಿಧ ಚಮರಾಳಿಯಿಂ ಪಾಳಿಯಿಂ
ಸಾಲಸೀಗುರಿಗಳೊಲೆದಾಟದಿಂ ಘಾಟದಿಂ
ಕಾಳಗಳ ಬಿರುದನಿಗಳ್ಸೆಕದಿಂ ಮಸಕದಿಂ ಸೂತರ ಪೊಗಳ್ಕೆಯಿಂದಂ ।
ಮೇಲೆತ್ತಿದಮಳಾತಪತ್ರದಿಂ ಛತ್ರದಿಂ
ವ್ಯಾಲೋಲಖಡ್ಗಗಳ ಥಾಳದಿಂ ಮೇಳದಿಂ
ಗೋಳಿಡುವ ಬಹುವಿಧದ ವಾದ್ಯದಿಂ ಚೋದ್ಯದಿಂ ಪಡೆ ಪದೆಪಿನಿಂ ನಡೆದುದು ॥೧೦

ಧರಣಿ ಜರಿದುದು ಗಜಂಗಳ್ ಮುಗ್ಗಿದುವು ಫಣೀ
ಶ್ವರನ ಪೆಡೆಗಳ್ ಮಣಿದುವಾದಿಕೂರ್ಮಂ ನಸಿದು
ಸರಸಿಜಭವಾಂಡಖರ್ಪರಮುನುರೆಕರ್ಚಿದಂ ಬ್ರಹ್ಮಾಂಡಮಿರದೊಲೆದುದು।
ಭರದೊಳುಬ್ಬೆದ್ದ ಕೆಂದೂಳಿಗಳ್ ಧ್ರುವಲೋಕ
ಪರಿಯಂತಮೊತ್ತಿದುದು ಶಿವಶಿವಾ! ಶಿವಬಲದ
ಭರವಸವನೇನೆಂಬೆನೈ ಸಿದ್ಧರಾಮ! ಕೇಳಚ್ಚರಿಯನಾಕ್ಷಣದೊಳು ॥೧೧

ಆರ್ಪೊಗಳಬಹುದು ಪರಸೈನ್ಯವಿಾ ಪರಿಯೊಳ್ ಪೊ
ಡರ್ಪಿನಿಂದೈತರುತ್ತಿರ್ದುದತ್ತಲು ಖಳಂ
ಸರ್ಪಭೂಷಣನ ಬಲಕಿದಿರಾಗಿ ನಡೆತರಲ್ ಕಾಣಿಸಿದುವಿರ್ಬಲಗಳುಂ ।
ಮಾರ್ಪಡೆಯನೀಕ್ಷಿಸಿದ ಮಾತ್ರದಿಂ ಬಿಡದಾರಿ
ದರ್ಪಟುಭಟರ್ ಶರಧಿಘೋಷದಿಂ ರಣಕೊದಗಿ
ಬರ್ಪ ಚಮೂಣಿಗರ ಕೋಳಾಹಳಂ ಮಸಗಿತದನೇನೆಂಬೆನದ್ಭುತವನು ॥೧೨

ಮುಂಚಿದುವು ಮನಮನಂಗಳದೃಷ್ಟಿ ದೃಷ್ಟಿಗಳ್
ಪಿಂಚಿದುವು ಕರದ ಕರವಾಳಂಗಳಾಕ್ಷಣಂ
ಮಿಂಚಿದುವು ಖಾತಿಯುಬ್ಬರಿಸಿದುವು ಭರಪೆಸದೊಳ್ಳೈದುತಿಹ ಪದಚರರ್ಗೆ।
ಅಂಚಿತದ ಹಲ್ಲಣದ ಗಮಕದಿಂ ಹೊಳಕಿದುವು
ಪಂಚಧಾರಾಪ್ರೌಢವಾಜಿಗಳ್ ತವಕದೆ ಪ
ಳಂಚಿದುವು ಕಾಲ್ಬೀಗದಾನೆಗಳ್ ಬಲಯುಗದ ಚಮೂಣಿ ಸಂಧಿಸುವಾ
ಗಳುಂ ॥೧೩

ಗೋಳಿಟ್ಟುವಖಿಳವಾದ್ಯಂಗಳದ್ಭುತರವದೆ
ಕಾಳಗಳ್ ಕೂಗಿದುವು ಗಜಹಯರಥಧ್ವನಿಗ
ಳೇಳಿಸಿದುವೊರಲ್ವ ವಾದ್ಯಧ್ವನಿಯನಿನಿತುರವಮಂ ಭಟರ ಹುಂಕೃತಿಗಳುಂ
ಕೀಳನಿಸಿದುವು ರಣದೊಳುಭಯವೀರರು ಮಹಾ
ಕೋಳಾಹಳದೊಳರದೆ ಸೇರಿ ಕೂರಲಗಿನಿಂ
ತೂಳವೆದ್ದಿರಿದಾಡುತಿರ್ದರತಿಖಾತಿಯಿಂ ಪೇಳಲೇನದ್ಭುತವನು ॥೧೪

ಮುಟ್ಟಿಮುಂದಲೆಗಳಂ ತುಡುಕುವರ್ ಮಿಡುಕುವರ್
ಜಟ್ಟಿಯಂತೊಳಪೊಕ್ಕು ತಬ್ಬುವರ್ ಕೊಬ್ಬುವರ್
ಸಿಟ್ಟಿನಿಂದಣೆದು ಕೈಯಿಕ್ಕುವರ್ ಸಿಕ್ಕುವರ್ ಕಾಯದೊಳ್ ಸಾಯಕವನು।
ಅಟ್ಟಿ ರಿಪುಸುಭಟರಂ ಕೆಡಪುವರ್ ಮಡಿಪುವರ್
ಕುಟ್ಟಿ ತಲೆಗಳ ಗಗನಕೆತ್ತುವರ್ ಮುತ್ತುವರ್
ನಿಟ್ಟಿಸುವೊಡರಿದೆನಿಸಿ ಕಾದುವರ್ ಮೋದುವರ್ ಪಟುಸುಭಟರಿರ್ಬಲ
ದೊಳುಂ ॥೧೫

ಪೇಳ್ವುದಚ್ಚರಿಯಾಯ್ತು ಚಾಣಿಗರ ಕೊಳುಗುಳಂ
ತೋಳ್ವಯ್ಲ ತುಟಿವೆರಳ ಬೊಬ್ಬೆಗಳ ರಿಪುಗಳಂ
ಸೀಳ್ವ ಸಡಗರದ ಕೋಳಾಹಳದ ಮೊದಲೆಯ ಮಾತುಗಳ ಪೊಸಮು
ಏಳ್ವ ಬೀಳ್ವರುಬುವೊತ್ತುವ ತನುಕ್ಷತಗಳಂ [ಳಿಸಿನ|
ತಾಳ್ವ ತವಕಿಸುವ ತಟ್ಟುಚ್ಚಿದ ಸರಳ್ಗಳಂ
ಕೀಳ್ವ ಕೋಳಂಕೊಂಬ ಸಂಭ್ರಮವನಿರದೆ ಪಡೆಯೆರಡುಮೀಕ್ಷಿಸುತಿ
ರ್ದುದು ||೧೬

ಇರ್ತಂಡದೊಳ್ ಚಾಣಿಪೊಯ್ದಾಡಿ ಮಡಿಯೆ ಸಂ
ವರ್ತಸಾಗರದಂತೆ ಕರಿತುರಗರಥಪಟುಭ
ಟರ್ತಡೆಯುದೆರಡುಬಲದಿಂ ನೂಂಕಿದರತುಳಕೋಲಾಹಲದ ರಭಸದಿಂ |
ಆರ್ತಡೆಯಬಹುದೆಂಬ ಪೆರ್ಮೆಯಿಂ ತಾಗಿದುವು
ತೇರ್ತೇರೊಳಶ್ವಮಶ್ವದೊಳಾನೆಯಾನೆಯೊಳ್
ಧೂರ್ತತ್ವದಿಂ ಭಟರ್ ಭಟರೊಡನೆ ಸೆಣಸಿದರ್ ನಾನಾಪ್ರಕಾರದಿಂದಂ ||೧೭

ತಿವಿದರೊತ್ತರಿಸಿದರ್ ನೂಂಕಿದರ್ ತಾಂಕಿದರ್
ಕವಿದರಿಟ್ಟಣಿಸಿದರ್ ಮುತ್ತಿದರ್ ಕುತ್ತಿದರ್
ಜವದೊಳಿರಿದಾಡಿ ಮುಗ್ಗಿದರ್ ತಗ್ಗಿದರ್ ಸಂಗರಾವೇಶದಿಂದಂ |
ಅವಗಡಿಸಿ ಹೊಕ್ಕು ಪೊಯ್ದಾಡಿದರ್ ಕೋಡಿದರ್
ನವರುಧಿರ ಧಾರೆಯೊಳ್ ಮುಳುಕಿದರ್ ಪೊಳಕಿದರ್
ತವಕದಿಂ ತಲೆಗಳಂ ಕುಟ್ಟಿದರ್ ಮೆಟ್ಟಿದರ್ ಬಿದ್ದಟ್ಟೆಗಳಹಿಂಡನು ||೧೮

ಮುರಿವುದಸುರರಸೇನೆಯೊರ್ಮೆ ದಿವಿಜರದಳಂ
ಪೆರತೆಗೆವುದೊರ್ಮೆ ಪಡಿಬಲಿಸಿ ನೂಂಕುವದೊರ್ಮೆ
ಪೊರೆಗೈವಸುರಬಲಂ ಬೆನ್ನೀವುದಮರಾರಿಗಳಸೈನಿಕಂ ಭರಗೊಳು |
ಇರಿತಮುರಿತದೊಳಂತು ಪೆರ್ಬಲದ ಸುಭಟರೊಳ್
ಕುರಿದರಿಯ ಖಂಡಗಳ ತುಂಡಗಳ ಮುಂಡಗಳ
ಮುರಿಮೂಳೆಪಿಂಡುಗಳ ಪೊಸಬಗೆಯ ಜೊಂಡುಗಳ ರಾಶಿಗಳಂ ಕಣ್ಗೆಸೆ
ದುದು ||೧೯

ಮತ್ತೆ ನೂಂಕುತ ಹರಿಯಜೇಂದ್ರಾದಿ ದಿಕ್ಪಾಲ
ರೊತ್ತರಿಸಿ ಸಕಲಸನ್ನಾಹದಿಂ ದೈತ್ಯರಂ
ಕತ್ತರಿಸಿ ಕಡಿದಿರಿದು ತರಿದು ಬರುತಿರಲಂದು ದನುಜರತಿಭೀತಿಯಿಂದಂ।
ನಿತ್ತರಿಸಿ ನಿಲಲಾರದೋಡುತಿರೆ ಸುರರು ಬೆಂ
ಬತ್ತಿ ಬೋಯೆಂದಾರ್ದು ಸಂಹರಿಸುತಿರಲಸುರ
ರೊತ್ತಾಯುದಿಂದೆ ದೊರೆಗಳೇ ಮುಂಕೊಂಡುನಡೆದರತಿಖಾತಿಯಿಂದಂ॥೨೦

ವಾಮನ ವಿರೂಪಾಕ್ಷ ಜಂಭ ಗಜಶಿರ ಖಡ್ಗ
ರೋಮ ವಿದ್ರಾವಣ ನಿಶುಂಭ ತಾರಕ ಕಾಲ
ನೇಮಿ ಜರ್ಝರ ಶಂಖಶಿರ ವಜ್ರನಾಭ ಖರ ಮುರ ಶುಂಭರಾದಿಯಾದ।
ಭೀಮರಾದಸುರನಾಯಕರೆ ಬರೆ ನೋಡಿ ಸು
ತ್ರಾಮಹರಿಯಜಮುಖ್ಯಸುರರೋಡುತಿರೆ ಕಂಡು
ಕಾಮಹರನಿರದೊಡನೆ ಹರಗಣಕ್ಕೆ ಸೆಲವಿಕ್ಕೆ ಮುಂಕೊಂಡರಾಕ್ಷಣ ದೊಳು ॥೨೧

ವರನಂದಿ ಮಾಕಾಳ ಕಾಲಹರ ಕಂಕಾಳ
ಧರ ಸೂರ್ಯಪಾತ ರೇಣುಕ ಭೈರವಾದಿಗಳ್
ಕರೆದ ಕಾರ್ಮುಕದ ಟಂಕಾರದಿಂ ಮೂಜಗಂ ತಲ್ಲಣಿಸೆ ಕೋಪದಿಂದಂ।
ಸರಳುಗಳ ಕರೆವುತೈತರೆ ದಾನವರ ಬಲದ
ನೆರೆದ ದೊಡ್ಡಗರಾನಲರಿಯುದೋಡಲ್ ಕಂಡು
ಮರುಳಬಲ ಶುಂಭ ಧೂಮ್ರಾಕ್ಷ ವೃತ್ರಾದಿಗಳ್ ಕೈಕೊಂಡರಾಹವವನು ॥೨೨

ಜಂಭನಂ ತಡೆದುಗ್ರನೆಚ್ಚಂ ವೃಷೇಶ್ವರಂ
ಶುಂಭನಂ ತೊಡಕಿದಂ ಭೈರವ ಕೆರಳ್ದಾ ನಿ
ಶುಂಭನಂ ತಾಗಿದಂ ವೃತ್ರಂಗೆ ದಂಡಧರನಿದಿರಾಗಿ ಕೋಲ್ಗರೆವನು।
ಕುಂಭಂಗೆ ಮಾರಾಂತು ಕಾಲಹರನೆಚ್ಚಂ ನಿ
ಕುಂಭನಂ ಕಂಕಾಳಧರನೈದೆ ಸೆಣಸಿದಂ
ಶುಂಭ ನಂದೀಶರ್ಗೆ ಕಾಳಗಂ ಬಲಿದುದದನೇನೆಂಬೆನದ್ಭುತವನು ॥೨೩

ಆದುದಂದಲ್ಲಿ ಸಮರಾಂಗವಿರ್ಬರಳಿಂದೆ
ಸೇದುವಂಬಿನ ಕಣ್ಣ ಕಿಡಿಯ ಗರ್ಜತ್ಸಿಂಹ
ನಾದದ ಸಘಾಟಿಕೆಯ ಘೋರಬದ್ಧಭ್ರುಕುಟಿ ಮುಖದ ಉಷ್ಣಶ್ವಾಸದ ।
ಸ್ವೇದಬಿಂದುಪ್ರತಾನಾನ್ವಿತಾಂಗದ ರಣಾ
ಮೋದಚಿತ್ತದ ಕರಚಮತ್ಕೃತಿಯ ವಿಜಯಸಂ
ಪಾದಿಗಳ್ ನಂದಿಶುಂಭಾಸುರರ್ ಧುರದೊಳೆಚ್ಚಾಡಿದರ್ ಗಾಢದಿಂದಂ ॥೨೪

ಶರಕೆಶರಮಥಟಿಗಧಟಾವೇಶಕಾವೇಶ
ಮಿರದೆ ಗಾಯಕೆ ಗಾಯಮಗ್ಗಳಿಕೆಗಗ್ಗಳಿಕೆ
ಕರಚಮತ್ಕಾರಕೆ ಚಮತ್ಕಾರಮಾರ್ಭಟೆಗೆಯಾರ್ಭಟೆ ತುಳಿಲ್ಗೆ ತುಳಿಲು ।
ಭರಕೆಭರವೊಡನೆ ಮೊದಲೆಗೆ ಮೊದಲೆಗಳುಂ
ಸರಿಯಾಗೆ ನಂದೀಶಶುಂಭಾಸುರರ್ ಮಹಾ
ಧುರದೊಳೆಚ್ಚಾಡಿದರ್ ಕೈಗುಂದದಾಕ್ಷಣಂ ಪೇಳಲೇನಚ್ಚರಿಯನು ॥೨೫

ಎಸುವರೆಚ್ಚಂಬುಗಳನೋರೋರ್ವರಿರದೆ ಖಂ
ಡಿಸುವರೊಡನೆಸುವರೈದುವಸರಳನಾಗ ಭೇ
ದಿಸುವರಾವೇಶದಿಂ ಕೂಗುವರ್ ಬೀಗುವರ್ ಕಣೆಕಣೆಯ ಸೋಂಕಿನಿಂದಂ ।
ಮಸಗಿಬೊಬ್ಬಿರಿವರಿರಿದೊತ್ತುವರ್ ಬಿಲ್ಗಳಂ
ಕುಸುರಿದರಿದರ್ ಕುಬುಬೆನುತ್ತಾರಿ ಕೊಂದು ಕ
ಟ್ಟೆಸಕದಿಂ ಪೊಸಬಿಲ್ಲನಾನುವರ್ ತೊಡುವರಂಬುಗಳನವರಾಹವದೊಳು
॥೨೬

ಕಡಿವ ಕಣೆಗಳ್ಗೆ ಗಡಿಯಿಲ್ಲ ಗಗನಾಂಗಣದೊ
ಳಡಿದಂಬುಗಳ್ಗೆ ಮಿತಿಯಿಲ್ಲ ಭಟರವಯವವ
ನುಡಿದಶರತತಿಗವಧಿಯಿಲ್ಲ ಮಾರಾಂತ ರಿಪುಗಳ ಲಲಾಟದ ಲಿಪಿಯನು ।
ತೊಡೆವ ಬಾಣಕೆ ಲೆಕ್ಕವಿಲ್ಲಂ ದಿಗಂತದೊಳ್
ಕೆಡೆವ ಇಷುಚಯಕ್ಕೆ ಹವಣಿಲ್ಲ ಪಾತಾಳಕ್ಕೆ
ನಡೆವ ಶರಕಂತಮಿಲ್ಲೆನೆ ಬಾಣಮಯವಾಯ್ತು ಮೂಜಗಂ ನಿಮಿಷದೊ
ಳಗೆ ॥೨೭

ರವಿಗೆ ಸ್ವರ್ಭಾನು ಪುಷ್ಕರಕೆ ಕಾದಂಬಿನೀ
ನಿವಹಮಬ್ಧಿಗೆಸೇತು ಪಾತಾಳಕಂ ಗರುಡ
ನವನಿರುಹತತಿಗೆ ಪೊಸಪೊದರೊಪ್ಪುವದ್ರಿಸಂಕುಲಕೆ ಘನತರದವಜ್ರಂ ।
ಭುವಿಗಂಧಕಾರಮಾಹವದೊಳಗೆ ಸೆಣಸುತಿಹ
ವಿವಿಧಸುಭಟರವ್ಯೆಗೆ ಜೋಡೆನಿಸಿ ಸುತ್ತಲುಂ
ಕವಿದುವೀ ಪಟುಭಟರ ಬಾಣಂಗಳೆಲ್ಲಾದಿಗಂತದೊಳು ಚೋದ್ಯದಿಂದಂ
॥೨೮

ಎಲೆ ಸಿದ್ಧರಾಮ! ಕೇಳ್ ಶುಂಭ ನಂದೀಶರ್ಗೆ
ಕಲಹದಾವೇಶಮುಬ್ಬರಿಸಿ ಕರಕಲಿತಮಂ
ದಲಿತ ಕಾರ್ಮುಕರೊಬ್ಬರೊಬ್ಬರಂ ಜಯಿಸುವ ಭಾಷೆಯಿಂ ಕೂರ್ಗಣೆಗಳಂ
ಬಳಸಲಿಸಿ ಬೀರುವಂ ದೈತ್ಯನಾಬಾಣಮಂ
ಸಲೆಸವರಿ ಬಿಸುಡುವಂ ವೃಷಭನಸುರಂ ಮತ್ತೆ
ಹೊಳವ ಹೊಂಬರೆಪದಂಬುಗಳಿಂದೆಸೆಯೆ ಕಡಿದ ವೃಷರಾಜನಾಕ್ಷಣ
ದೊಳು ॥೨೯

ಚಾಪಮಂ ಕಡಿದನುಡಿದಂ ತೇರನಾಹಯದ
ರೂಪಮಂ ಛಿದ್ರಿಸಿದನಾ ಸೂತನಂ ತರಿದು
ಕೋಪಮಂ ತಾಳ್ದು ಸೀಗುರಿಛತ್ರಚಾಮರ ಪತಾಕೆಗಳ ತಡೆಗಡಿದನು ।
ತಾಪಮಂ ತೋರಿದಂ ಶುಂಭನೊಳು ತದ್ರಣಾ
ಟೋಪಮಂ ನೋಡಿ ವಿಸ್ಮಿತನಾಗಿ ದಾನವಂ
ಪಾಪಮಂ ಭಾವಿಸದೆ ಕಟ್ಟುಮುರಿದೋಡಿದಂ ಭೀತಿಯಿಂದೇನೆಂಬೆನು ॥೩೦

ಪೇಳಲೇನಚ್ಚರಿಯನಿಂತುಭಯ ನಾಯಕರ್
ಕಾಳಗದೊಳಚ್ಚಾಡೆ ವೃಷಭಾದಿ ಪಟುಭಟರ
ಕೋಳಾಪಳವನಾಂತು ಸೈರಿಸದೆ ಮುರಿದರೊಂದೇಬಾರಿ ದೊರೆದೊರೆ
ಭಾಳಲೋಚನನ ಭಟರಿಂದೆ ಜೆಂಬತ್ತಿದರ್ [ಗಳು ।
ತೂಳದಿಂದಾಕರ್ಣ ಪರಿಯಂತ ಸೇದಿದ ಕ
ರಾಳಸ್ಫುಲಿಂಗಸಂಗತ ಬಾಣನಿಚಯದಿಂದೇನೆಂಬನಾಹವವನು ॥೩೧

# ಶ್ರೀರಾಮಾಭ್ಯುದಯಕಥಾಕುಸುಮಮಂಜರಿ

## ಬಾ ಲ ಕಾ ಂ ಡ

### ಮೂರನೆಯ ಸಂಧಿ.

ಸೂಚನೆ॥ ಪರಮಮುನಿ ವಾಲ್ಮೀಕಿ ರಾಮನ
ಚರಿತೆಯನು ಸಂಕ್ಷೇಪದಲಿ ಕುಶ
ಗರುಹಿದನು ಜಯವಿಜಯರ [1] ಕಥಾಸ್ಥಿತಿಯನೊಲವಿಂದ ॥

ಸುರರಿಗೋಸ್ಕರ ದಶರಥಂಗವ
ತರಿಸಿ ಮುನಿಪನ ಕ್ರತುವ ರಕ್ಷಿಸಿ
ಹರನ ಧನುವಂ ಮುರಿದು ಸೀತೆಯನೊಲಿಸಿ ಭಾರ್ಗವನಾ ।
ಗರುವದೇಳ್ಗೆಯ ಮುರಿದಯೋಧ್ಯಾ
ಪುರಿಗೆ ಬಿಜಯಂಗೈದ ಲಕ್ಷ್ಮೀ
ವರನು ಶ್ರೀರಾಮಾಭಿಧಾನದಿ ಬಾಲಕಾಂಡದಲಿ ॥ ೧

ಜನಕನಾಜ್ಞೆಯ ವಹಿಸಿ ಲಕ್ಷ್ಮಣ
ಜನಕನಂದನೆ ಸಹಿತ ಪರಿಪರಿ
ವನವ ಸಂಚರಿಸುತ ಜಟಾವಲ್ಕಲಗಳನು ಧರಿಸಿ ।
ಅನುಜ ಭರತನನೊಡಬಡಿಸಿ ಪದ
ವನಜಪಾದುಕವಿತ್ತು ಕಳುಹಿದ
ವಿನಯದಲಿ ರಾಘವನಯೋಧ್ಯಾ ನಾಮಕಾಂಡದಲಿ ॥ ೨

---

[1] ಕಥಾವಿಸ್ತರವನುಸುರಿದನು.

ಖಲವಿರಾಧನ ಮಡುಹಿ ದನುಜೆಯು
ಸೆಳೆದು ನಾಸಿಕವರಿಸಿ ನಿಜಭುಜ
ಬಲದೊಡನೆ ಖರದೂಷಣತ್ರಿಶಿರಾದಿ ದಾನವರ ।
ಗೆಲಿದು ಮಾಯಾಮೃಗವ ಖಂಡಿಸಿ
ಯಿಳೆಯು ಮಗಳ ವಿಯೋಗದಲಿ ಬಂ
ದಿಳಿದ ಪಂಪಾತಟಕೆ ರಾಮನರಣ್ಯಕಾಂಡದಲಿ ॥ ೩

ಹನುಮಗಭಯವನಿತ್ತು ವಾಸವ
ತನಯನಂ ಪರಿಹರಿಸಿ ಸುಗ್ರೀ
ವನಿಗೆ ಪಟ್ಟವಕಟ್ಟಿ ಕಪಿಬಲವೆರಸಿ ಮುಂಬರಿದು ।
ವನಚರೋತ್ತಮರಿಂದ ನಿಮಿನಂ
ದನಸುತೆಯು ಪರಿಣಾಮವನು ಕೇ
ಳ್ದನು ಪ್ರಮೋದದಿ ರಾಘವನು ಕಿಷ್ಕಿಂಧಕಾಂಡದಲಿ ॥ ೪

ವನಚರರ ಬಲಗೂಡಿ ನಡೆದಾ
ವನಧಿ ತಟದಲಿ ನಿಂದು ರಾವಣ
ನನುಜನಂ ಪತಿಕರಿಸಿ ಸೇತುವಕಟ್ಟಿ ವಾಲಿಜನಾ ।
ಘನನಿಯೋಗಕೆ ಕಳುಹಿ ಲಂಕಾ
ಜನಪದದ ಮುತ್ತಿಗೆಗೆ ನಿಜವಾ
ಹಿನಿಯು ನೆರಹಿದ ರಾಮ ಸುಂದರನಾಮಕಾಂಡದಲಿ ॥ ೫

ಧುರದಿ ರಾವಣ ಕುಂಭಕರ್ಣಾ
ದ್ಯರ ವಧಿಸಿ ಜನಕಜೆಯನಂಗೀ
ಕರಿಸಿ ಕಪಿಪುಂಗವರು ಸಹ ಸಾಕೇತಪುರವರಕೆ ।
ಭರದೊಳೈತಂದಖಿಳಧರಣೀ
ಶ್ವರರು ಜಯಜಯಯೆನಲು ಪಟ್ಟವ
ಧರಿಸಿದನು ಶ್ರೀರಾಮಚಂದ್ರನು ಯುದ್ಧಕಾಂಡದಲಿ ॥ ೬

ಧರೆಯು ಧರ್ಮದಿ ಪೊರೆದು ಲವಣಾ
ಸುರನ ಮರ್ದಿಸಿ ವಾಜಿಮೇಧಾ
ಧ್ವರವ ವಿರಚಿಸಿ ಸಕಲರಾಜ್ಯವನಿತ್ತು ಪುತ್ರರಿಗೆ ।

ಪರಿಜನರನೊಡಗೊಂಡು ತನ್ನಯ
ಚಿರತರದ ವೈಕುಂಠನಗರಾಂ
ತರಕೆ ನಡೆದನು ರಾಮತಾನುತ್ತರದಕಾಂಡದಲಿ ‖ ೭

ಎಂದು ಪೇಳಿದ ಕಥೆಗೆ ಸೀತಾ
ನಂದನರು ಸಂಭ್ರಮಿಸಿ ಧಾತ್ರಿಯೊ
ಳಿಂದಿರಾಪತಿ ಮನುಜಲೀಲೆಯನಾಂತನೇಕೆನಲು ।
ಮಂದಹಾಸ ಮುಖಾರವಿಂದ ಮ
ರಂದ ಬಿಂದುಗಳೆನಲು ವಚನಾ
ನಂದದಲಿ ರಾಮಾಯಣ[1]ಕಥಾತತಿಯನುಸುರಿದನು ‖ ೮

ಪರಮಪುರುಷನ ದಿವ್ಯತೇಜೋ
ಭರಿತ ತನುಪುಳಕಾಂಬುಕಣಗಳು
ಸರಿಸರಿದು ಪೊಳೆಯಾಗಿಹುದು ವಿರಜಾಭಿಧಾನದಲಿ ।
ಪರಿಪರಿಯ ಸದ್ಗಂಧಶೀತಳ
ವೆರಸಿ ಸಕಲರ ಹೃದಯರಂಜನ
ಕರಮೆನಿಸಿ ಯೋಜನಸಹಸ್ರಾಯತದಿ ರಾಜಿಪುದು ‖ ೯

ನಳಿನನಾಭನ ಭಕುತಿ ಭವಭವ
ಗಳಲಿ ದೊರೆಕೊಂಡಖಿಳಜೀವರು
ಜಲಚರತ್ವವ ಬಯಸಿ ತಪಸ್ವಹಿಸಿಯು ವಾರಿಯಲಿ ।
ತೊಳತೊಳಲಿ ಕರಿ ಮಕರ ಕರ್ಕಟ
ಬಲವದನಿಮಿಷಕಮಠರೂಪವ
ತಳೆದು ನಲಿದಾಡುತ್ತಲಿಹರಚ್ಯುತಫಲಾಪ್ತಿಯಲಿ ‖ ೧೦

ನಳಿನಕುವಲಯವಾಸ ಭೃಂಗಾ
ವಳಿಯ ಝಂಕೃತಿ ರಾಜಹಂಸೆಯ
ಕಲಕಲಧ್ವನಿ ಚಕ್ರಬಕಕಾರಂಡ ಸಾರಸದಾ ।

---

1 ಕಥಾವಿಸ್ತರವನುಸುರಿದನು.

ಪಲಬಗೆಯ ನರ್ತನವಿಶೇಷಂ
ಗಳಿಗೆ ನೆಲೆವನೆಯಾಗಿ ಭೋರ್ಗರೆ
ದೊಲೆದೊಲೆದು ಪ್ರವಹಿಸುತಲಿಹದನುಗಾಲ ಸೌಖ್ಯದಲಿ ॥ ೧೧

ಸಾಲುವಿಡಿದೈತರುವ ಘನಕ
ಲ್ಲೋಲಮಾಲೆಯ ಹೊಯ್ಲಿನಿಂದು
ಚ್ಚಳುತಿಹ ತುಂತುರ‍್ಗಳಭ್ರಾಂಗಣವ ಚುಂಬಿಸಲು ।
ತೊಳಗೊಂಡಾವರ್ತಸುಳಿಸುಳಿ
ದಾಳಗೊಡದಾನಂದಲಹರಿಯು
ಕೇಳಿಯುಲಿ ಘುಳುಘುಳಿಪ ಬುದ್ಬುದವೆಸೆವುದೆಲ್ಲೆಡೆಯಾ ॥ ೧೨

ಇತ್ತಟದ ನವರತ್ನಗಳ ಮಿಗೆ
ತೆತ್ತಿಸಿದ ಸೋಪಾನಗಳ ನಿಳಿ
ವೃತ್ತ ನಿಜದೀಪಪ್ರಭೆಯ ದೆಸೆದೆಸೆಗೆ ಪಸರಿಸುತ ।
ಮೊತ್ತಮೊತ್ತಗಳಾಗಿ ನಿರ್ಜರ
ನೃತ್ತಮುಖಿಯರು ವಾರಿಕೇಳಿಗೆ
ಹತ್ತಿ ಮತ್ತತೆಯಿಂದ ವಿಭ್ರಾಜಿಸಿದರೊಲವಿನಲಿ ॥ ೧೩

ತೀರವೆರಡರಲಪರಿಮಿತ ಶೃಂ
ಗಾರವನಗಳ ಸಾಲ್ವಿಡಿದ ಮಂ
ದಾರ ಮಂಜುಳ ವಕುಳ ಪನಸ ರಸಾಲ ಜಂಬೀರ ।
ನಾರಿಕೇಳ ಕ್ರಮುಕ ಮುಖ್ಯೋ
ದಾರ ಫಲಗಳು ಕಿಸಲ ಸುಮ ಫಲ
ಭಾರದಿಂದೋಲಾಡುತಿಹುವು ಪರೋಪಕಾರದಲಿ ॥ ೧೪

ಆಮಹೀರುಹ ಮೂಲಗಳ ಹಿಮ
ಧಾಮಕಾಂತವಿಚಿತ್ರವೇದಿಯು
ಹೇಮರಚಿತದ ನವ್ಯಪೀಠಂಗಳಲಿ ಕುಳ್ಳಿರ್ದು ।
ಪ್ರೇಮದಿಂ ಗಂಧರ್ವ ಕಿನ್ನರ
ಭಾಮಿನಿಯರೊಗ್ಗಾಗಿ ಶ್ರೀಹರಿ
ನಾಮಕೀರ್ತನೆಗಳನು ಪಾಡುತಲಿಹರು ಭಕ್ತಿಯಲಿ ॥ ೧೫

ಆವದೆಸೆಯುಲಿ ನೋಡಲಿಕೆ ವೃಂ
ದಾವನಂಗಳ ಸಾಲುಗಳು ಮ
ತ್ತಾವ ಕಡೆಯುಲಿ ದಿಟ್ಟಿಸಿದೊಡಶ್ವತ್ಥ ಭೂಜಗಳು ।
ಆವೆಡೆಯುನೀಕ್ಷಿಸೆ ಸುಗಂಧಸು
ಮಾವಳಿಯು ವಲ್ಲರಿಯು ಕುಂಜಗ
ಳಾವದಿಕ್ಕ ವಿಲೋಕಿಸಲು ಮಣಿಕೃತಕ ಶೈಲಗಳು ॥ ೧೬

ಆ ನದಿಗೆ ಬಲವೆಂದು ಬ್ರಹ್ಮ
ಜ್ಞಾನ ಮುನಿಕೋಟಿಗಳು ನಿತ್ಯ
ಸ್ನಾನ ಸಂಧ್ಯಾವಂದನಾನುಷ್ಠಾನ ವಿಧಿಗಳನು ।
ನೂನವಿಲ್ಲದೆ ರಚಿಸಿ ಸಕಲಸು
ಖಾನುಭವದಲಿ ವಾಸುದೇವ
ಧ್ಯಾನಮಾನಸರಾಗಿ ಜಪಿಸುತಲಿಹರು ದೆಸೆದೆಸೆಗೆ ॥ ೧೭

ಆತರಂಗೆಯು ಬಳಸಿ ಪರಿಖೆಯು
ರೀತಿದೋರಲು ಮಧ್ಯದಲಿ ಸಂ
ಜಾತಮಾಗಿಹುದಮಲಕಾಂಚನಕಮಲದಂದದಲಿ ।
ಜಾತಿನವರತ್ನಪ್ರಭಾವದಿ
ಖ್ಯಾತಸಪ್ತಾವರಣದಗ್ರ ಮ
ಹಾತಿಶಯುಮೆಸಗಿಹುದು ಪುರ ವೈಕುಂಠನಾಮದಲಿ ॥ ೧೮

ಜ್ಞಾನಮುಮುದಾಗಾರ ಸಕಲಸು
ಖಾನುಭವ ಶೃಂಗಾರ ಮಂಗಳ
ಗಾನರಸಕಾಸಾರ ಶ್ರುತಿ ಶಾಸ್ತ್ರಗಳ ಬೀಡಾರ ।
ಮೌನಿಗಳ ಮಂದಾರ ಭಕ್ತಜ
ನಾನುರಾಗಾಧಾರ ಭಾಗ್ಯನಿ
ದಾನಪಾರಾವಾರಮೆನಲಾಪುರ ವಿರಾಜಿಪುದು ॥ ೧೯

ತರಣಿಶಶಿಶತಕೋಟಿಬಿಂಬಗ
ಳರುದೆನಿಸಿ ತತ್ಪುರದ ಚಾಮಿಾ
ಕರದ ಸಪ್ತಾವರಣದಗ್ರಸ್ಥಾನಪೀಠದಲಿ ।

ಚಿರತರದಿ ತರಗೊಂಡುವೆನೆ ಪರಿ
ಪರಿಯಚಿತ್ರದ ಪುಷ್ಯರಾಗ
ಸ್ಫುರಿತ ವಜ್ರೋತ್ತುಂಗ ಶೃಂಗಾವಳಿಗಳೆಸೆದಿರಲು ॥ ೨೦

ಸಿರಿವರನ ಕೀರ್ತಿಪ್ರತಾಪಗ
ಳುರುತರಾಕೃತಿವಡೆದು ತಮ್ಮು
ತ್ಕರುಷತೆಯ ತೋರಿಸಲು ವಾದಿಸಿ ಕಾಂಡಕರ್ಪರವಾ ।
ಶಿರದೊಳಾಂತುವೊ ಯೆಂದೆನಲು ಹಿಮ
ಕರಶಿಲಾಸೌವರ್ಣಮಯ ಗೋ
ಪುರ ಸಮುನ್ನತ ಸೌಧಪಙ್ಕ್ತಿಗಳೆಸೆವುವೆಲ್ಲೆಡೆಯಾ ॥ ೨೧

ಗರುಡಕೇತನ ಮುಖ್ಯನಾನಾ
ಬಿರುದಿನತಿಶಯಚಿತ್ರಚಾಮಿರಾ
ಕರಪಟಧ್ವಜರಾಜಿಗಳು ತಂಬೆಲರ ಸೋಂಕಿನಲಿ ।
ತೆರಹುಗೊಡದೊಲೆದಾಡುತಿಹುವಾ
ಪುರದಸೌಧಾಂತರದ ಕಿನ್ನರ
ತರುಣಿಯರಗಾನಕೆ ಶಿರಃಕಂಪನವಮಾಳ್ಪಂತೆ ॥ ೨೨

ಕಡುವಿಚಿತ್ರದ ರನ್ನಪದಕದ
ನಡುವೆ ನಾಯಕರತುನವಿರ್ಪವೊ
ಲುಡುಗಣಾವೃತಮಾಗಿ ಹಿಮಕರಬಿಂಬ ತೋರ್ಪಂತೆ ॥

ಸಡಗರದಪ್ರಾಕಾರಸಪ್ತಕ
ದೊಡಲೊಳಮಿತ ಪಿತಾಮಹಾಂಡಗ
ಳೊಡೆಯನರಮನೆ ಯಿಹುದು ತೇಜಃಪುಂಜವೆಂದೆನಿಸಿ ॥ ೨೩

ಆರಮಾಧವನರಮನೆಗೆ ಶೃಂ
ಗಾರಮೆನೆ ಗೋಚರಿಪ ಪೂರ್ವ
ದ್ವಾರಪಾಲಕರಬ್ಜಚಕ್ರಗದಾಮಹಾಯುಧವ ।
ಚಾರು ಚಾತುರ್ಭುಜದ ತುಲಸಿಯ
ಹಾರಗಳ ಲಲಿತೋರ್ಧ್ವಪುಂಡ್ರದ
ವೀರಶೇಖರರಿಹರು ಭದ್ರಸುಭದ್ರನಾಮಕರು ॥ ೨೪

ಸರಸಿಜಾಕ್ಷನ ದಿವ್ಯಮುದ್ರೆಯ
ಧರಿಸಿ ತೆಂಕಣಕಡೆಯ ಬಾಗಿಲೊ
ಳಿರುತಿಹರು ಜಯವಿಜಯರೆನಿಪ ಮಹಾಬಲಾನ್ವಿತರು ।
ನಿರುತಪಡುವಣ ದೆಸೆಯ ಕಕ್ಷಾಂ
ತರವ ಪಾಲಿಸುತಿಹರು ದೇವನ
ಕರುಣವಾಂತು ಬಲಪ್ರಬಲಚಂಡಪ್ರಚಂಡಕರು ॥ ೨೫

ಚಿತ್ತಜನ ಪಿತನಡಿಗೆ ಮನವನು
ತೆತ್ತು ಸಾರೂಪ್ಯದಲಿ ಜಾಗ್ರತೆ
ವೆತ್ತು ಮಿಗೆ ಶಂಖನಿಧಿ ಪದ್ಮನಿಧಿ ಪ್ರಸಿದ್ಧಕರು ।
ವೃತ್ತಮಣಿಗಣಖಚಿತಚಿತ್ರದೊ
ಳುತ್ತಮೋತ್ತಮವಾಗಿ ರಾಜಿಪ
ವುತ್ತರದ್ವಾರಾಭಿರಕ್ಷಕರೆನಿಸಿ ಕಾದಿಹರು ॥ ೨೬

ಇಂತು ಪಾಲಿತವಾಗಿ ಲಕ್ಷ್ಮೀ
ಕಾಂತನಿ*ಗೆಪ್ರಿಯವಾದ ಮಣಿಶು
ದ್ಧಾಂತಮಧ್ಯದೊಳತಿಸಮುನ್ನತ ಬಹುವಿಶಾಲದಲಿ ।
ಕಾಂತಿವಡೆದು ನಿರಂತರದ ಶುಭ
ವಾಂತು ತೇಜದಿ ಮುನಿಸುರಾದ್ಯರ
ಸಂತಸವಮನೆಯೆನೆ ಸಭಾಮಂಟಪ ವಿರಾಜಿಪುದು ॥ ೨೭

ಮೃಗಮದದ ಸಾರಣೆಯ ಕುಂಕುಮ
ದೊಗುಮಿಗೆಯ ಕಾರಣೆಯ ಪೊಸಮು
ತ್ತುಗಳ ನಾನಾಬಗೆಯ ಚಿತ್ರದ ರಂಗವಲ್ಲಿಗಳ ।
ಝುಗಝುಗಿಪ ಪೊಂಬಟದ ಮೇಲ್ಕ
ಟ್ಟುಗಳ ರನ್ನದ ಲಂಬಣದ ಸಾ
ಲುಗಳ ಪಚ್ಚೆಯ ತೋರಣಗಳೋರಣವ ಪಸರಿಪುವು ॥ ೨೮

ಘುಗುಘುಗಿಸೆ ಕಂಪೆಸೆವ ಬಿರಿಸಂ
ಪಗೆ ಬಕುಳ ಕೆಂಜಾಜಿ ಸೇವಂ
ತಿಗೆ ಸುರಗಿ ಮಂದಾರ ಮಲ್ಲಿಗೆ ಮೊಲ್ಲೆ ಮೊದಲಾದ ।

ಬಗೆಬಗೆಯ ಕುಸುಮಗಳ ಪೊಸವಾ
ಸುಗಳ ಮಧ್ಯದರತ್ನಮಯ ಪೀ
ಠಗಳ ನಾನಾಬಣ್ಣಿಗೆಯ ಲೋಡುಗಳು ರಂಜಿಸುವು ॥ ೧೯

ಆಮಹಾಮಂಟಪದ ಮಧ್ಯದಿ
ರಾಮಣೀಯಕ ನವ್ಯರತ್ನ
ಸ್ತೋಮಕೀಲಿತ ದಿವ್ಯತರ ಸಿಂಹಾಸನಾಗ್ರದಲಿ ।
ಶ್ರೀಮಹೀಸತಿಯರನು ತನ್ನಯ
ಕೋಮಲಾಂಕಗಳಲ್ಲಿ ತಾಳ್ದು ಮ
ಹಾಮಹಿಮ ನಾರಾಯಣನು ರಾಜಿಸಿದನನಿಶದಲಿ ॥ ೨೦

ಶಿರದ ಮಕುಟದ ಪೆರೆನೊಸಲ ಕ
ಸ್ತುರಿಯ ತಿಲಕದ ಮದನಚಾಪವ
ಮುರಿವ ಪುರ್ಬಿನ ಸಂಪಗೆಯ ಪಗೆಗೊಂಬ ನಾಸಿಕದ ।
ಕರುಣದುಂಬಿಹ ಲೋಚನದ ಭಾ
ಸುರ ಮಕರ ಕುಂಡಲದ ಶ್ರು*ತಿಗಳ
ಮಿರುಪ ಬಿಂಬಾಧರದ ಸಿರಿಮೆರೆದುದು ರಮಾಧವನಾ ॥ ೨೧

ಪೊಳವ ವಜ್ರದ ಮಣಿಯ ಸೊಬಗಂ
ಪಳಿವ ರದನಾವಳಿಯ ನಸುನಗೆ
ಪೊಳವ ವದನದ ಮುದ್ದು ಚುಬುಕಾಗ್ರದತ್ರಿ* ರೇಖೆಗಳಾ ।
ತಳೆದ ಕಂಠದ ವೈಜಯಂತಿಯ
ಲಲಿತ ತುಲಸಿಯ ಮಾಲೆ ಕೌಸ್ತುಭ
ಕಲಿತ ಮುಕ್ತಾಹಾರ ಪದಕದ ಸಿರಿ ವಿರಾಜಿಪುದು ॥ ೨೨

ಚಾರು ಚಾತುರ್ಭುಜಗಳಿಗೆ ಶೃಂ
ಗಾರಿಸಿದ ರತ್ನಾಂಗದಂಗಳ
ನೋರಣದಿ ಝಣಝಣಿಪ ಹಸ್ತದ ಕಟಕ ಮುದ್ರಿಕೆಯ ।
ಪೇರುರದ ಬಾಸನ್ನ ಶ್ರೀವ
ತ್ಸೋರುಕಾಂತಿಯ ಕಾಳಭುಜಗ ಕಿ
ಶೋರದಂದವ ತೋರ್ಪ ಬಾಸೆಯ ಚೆಲುವು ರಂಜಿಸಿತು॥ ೨೩

ಹಿಂಗದಿಹ ಲಾವಣ್ಯ ಶರಧಿ ತ
ರಂಗವೆನೆ ಶೋಭಿಸುವ *ತ್ರಿವಳಿಯು
ಸಂಗಡದ ಸುಳಿಯೆಂದೆನಿಪ ನಾಭೀಸರೋರುಹದ ।
ವಿಂಗಡಿಸಲೆಡೆಗೊಡದ ಬ್ರಹ್ಮಾಂ
ಡಂಗಳಿಗೆ ನೆಲೆಯಾದ ಪೊಡೆಯಂಬೆ
ಡಂಗನಭಿವರ್ಣಿಸುವ್ರೊಡರಿದಾದಿಮಫಣಾಧರಗೆ ॥ ೨೪

ಗಗನದಂದವ ನಗುವ ನಡುವಿಗೆ
ಬಿಗಿದಮರ್ಚಿದ ಪೊಂಬಟದ ಪೊಳೆ
ಪೊಗೆವ ಮಣಿಯುಡ್ಡಿಕೆಯು ಡಾಬಿನ ಮೇಖಲಾಂಚಿತದ ।
ಹೊಗರೊಗುವ ಸೈಕತನಿತಂಬದ
ನಿಗಿನಿಗಿಪ ಪೊಂಬಾಳೆದೊಡೆ ಜಾ
ನುಗಳ ಜಂಘಾ ವಿಭ್ರಮವನಾರ್ ಗಣಿಸಬಲ್ಲವರು ॥ ೨೫

ಚರಣಯುಗಳದ ಸರಪಣಿಯು ನೂ
ಪುರದ ರಕ್ಕಸಗಂಡಪೆಂಡ್ಯದ
ಬೆರಳ ಮುದ್ರಿಕೆ ಚೆನ್ನಗುರು ಕುಂಕುಮದಲತ್ತಗೆಯು ।
ಸಿರಿದಳಿರ್ದಳ ಸೌಕುಮಾರ್ಯವ
ಸರಕುಗೊಳದಡಿದಳದ ಸಿಂಗರ
ಮೆರೆಯೆ ಲಕ್ಷ್ಮೀರಮಣ ನೋಲಗಗೊಡುತಲಿರುತಿರ್ದ ॥ ೨೬

ಹರಿಯುಭಯಪಾರ್ಶ್ವದಲಿ ತೇಜೋ
ತ್ಕರಸುದರುಶನ ಪಾಂಚಜನ್ಯ
ಸ್ಫುರಿತನಂದಕ ಶಾರ್ಙ್ಗಕೌಮೋದಕಿಗಳುಜ್ಜ್ವಲಿಸೆ ।
ಗರುಡ ವಿಷ್ವಕ್ಸೇನ ಮೊದಲಾ
ದರು ಪುರೋಭಾಗದಲಿ ತಮ್ಮಯ
ಕರಯುಗವ ಜೋಡಿಸುತ ನಿಂದಿಹರಧಿಕಭಕ್ತಿಯಲಿ ॥ ೨೭

ಸಕಲ ದಿಗುಪಾಲಕರು ದಿವಿಜ
ಪ್ರಕರದೊಡನೈತಂದು ತಮ್ಮಯ
ಭಕುತಿಯಂ ಪ್ರಕಟಿಸುತ ದೇವನ ಪೂರ್ವಭಾಗದಲಿ ।
ಚಕಚಕಿತ ಮಣಿವೇತ್ರಗಳನು
ತ್ಸುಕದಿ ಹಸ್ತದೊಳಾಂತು ಸಿರಿಪಾ
ದಕೆ ಸಮರ್ಪಿಸುತಿಹರು ಕೃತಸೇವಾವಿಶೇಷಗಳ ॥ ೩೮

ಸದಮಳದ ಭಕ್ತಿಯೊಳರುಂಧತಿ
ಮೊದಲೆನಿಪ ಋಷಿಪತ್ನಿಯರು ಸಂ
ಮುದದಿ ಜಾಹ್ನವಿ ಮುಖ್ಯವಾದ *ಪ್ರಧಾನ ತಟನಿಗಳು ।
ತ್ರಿದಶ ಕುಲಸಾಧ್ವಿಯರು ಸಿರಿಭೂ
ಸುದತಿಯರು ವೈಗಾಯ್ದು ದೇವನ
ಹೃದಯದೊಲವಂ ತಿಳಿದು ಸೇವಿಸಿಯೆನುತ ಬಳಸಿಹರೂ ॥ ೩೯

ವೃತ್ತಮಣಿಮೃಗರಾಜಪೀಠವ
ನುತ್ತಿ ಯುಪ್ಪರಕೆದ್ದು ಮಾಣಿಕ
ವೆತ್ತ ಸಾಸಿರವೆಡೆಯು ವಲಯಾಕಾರದಲಿ ನಿಲಿಸಿ ।
ಚಿತ್ತಜನಪಿತನುತ್ತಮಾಂಗಕೆ
ಪತ್ತಿಸಿದ ಮಕುಟಾಗ್ರಕೆತ್ತಿದ
ಮುತ್ತಿನಂದದ ಸತ್ತಿಗೆಯೊಳೊಪ್ಪಿದನು ಭುಜಗೇಂದ್ರ ॥ ೪೦

ತುರುಬಲುಗೆ ಫಾಲದಲಿ ಕಿರುಬೆಮ
ರೊರೆಯೆ ಮುಕ್ತಾಹಾರ ಲಂಬಿಸೆ
ಗುರುಕುಚಂಗಳ ಭಾರಕಸಿನಡುಬಳುಕಿ ಕಟಿಯೊಲೆಯೆ ।
ಕರಕಟಕ ಝಣಝಣಿಸಲಪ್ಸರ
ತರುಣಿಯರು ಸಾಲ್ಗೊಂಡು ಸಿತಚಾ
ಮರವ ಚಿಮ್ಮುತಲಿರ್ದರಚ್ಯುತನುಭಯಪಾರ್ಶ್ವದಲಿ ॥ ೪೧

[1] ಮಡಿಪೆಲೆಯು ಪೊಂಬರಣಿ ಕನ್ನಡಿ
ಕಡುಗ ಪೆಂಚೆಯು ಕುಂಚ ಪಾವುಡ
ಪಡಿಗ ಪಾವುಗೆ ಬಿಜ್ಜಣಿಗೆ ಹೊಂಗಟ್ಟು ಬೆತ್ತಗಳ ।

---

[1] ಪುಡುಪೆಲೆಯು

ಪಿಡಿದು ಸೇವಕಜನರು ಕಣ್ಣೆವೆ
ಯಿಡದೆ ಹರಿಯ ನಿರೀಕ್ಷಿಸುತ ಬಂ
ದೊಡನೆ ಕಟ್ಟಳೆಯೊಳಗಕೆ ಸನ್ನದ್ಧರಾಗಿಹರು ॥ ೪೨

ಸವಿನಯದ ಸಾಹಿತ್ಯ ವಿದ್ವತ್
ಕವಿ ಗಮಕಿ ಗಾಯಕ ಪುರಾಣಿಕ
ವಿವಿಧವಾದಿತಿಹಾಸಪರಿಹಾಸಕ ವಿಪಂಚಿಕರು ।
ವಿವರದಿಂ ಬಿರುದಾವಳಿಯನು
ತ್ಸವದಿ ಪೊಗಳುವ ವಂದಿಮಾಗಧ
ನಿವಹ ಭೋರ್ಗರೆವುತ್ತಲಿಹುದಾ ಸಭೆಯ ಚೌಕದಲಿ ॥ ೪೩

ಕೊರಳ ತುಲಸಿಯ ಮಾಲೆಗಳ ಭಾ
ಸುರದ ವರಚಕ್ರಾಂಕಭುಜಗಳ
ಮಿರುಪಸನ್ನೆರಡೂರ್ಧ್ವಪುಂಡ್ರದ ನಿತ್ಯಸಾತ್ವಿಕದ ।
ಪರಮ ಭಾಗವತಾಗ್ರಗಣ್ಯರು 
ಮುರಳಿ ದಂಡಿಗೆ ತಾಳ ಮದ್ದಳೆ
ಸರದಿ ಕುಣಿಕುಣಿದೊಗಿಸುತಿಹರಾನಂದಬಾಷ್ಪಗಳಾ ॥ ೪೪

ಭರತಶಾಸ್ತ್ರೋಕ್ತದಲಿ ರಂಭಾ
ತರುಣಿಯೂರ್ವಸಿ ಮುಖ್ಯವಾಗಿಹ
ಸುರಗಣಿಕೆಯರು ದಿವ್ಯವೇಳಸ್ಫುರಣೆ ಭೋರ್ಗರೆಯೆ ।
ಪರಿಪರಿಯ ನಟನಾವಿಧದ ವೈ
ಸಿರಿಯತೋರುತ ತಮ್ಮಮೃದುಕರ
ಸರಸಿಜದಿ ಪುಷ್ಪಾಂಜಲಿಯ ಸೂಸುವರು ಮುಂಗಡೆಯಾ ॥ ೪೫

ಸುರನರೋರಗ ಯಕ್ಷಕಿನ್ನರ
ವರಮರುದ್ಗಣ ಸಿದ್ಧ ಚಾರಣ
ಗರುಡಗಂಧರ್ವಪ್ರಮುಖ್ಯರು ಕೋಟಿಕೋಟಿಗಳು ।
ನೆರೆದು ದುಂದುಭಿಡಮರುಢಕ್ಕಾ
ಸ್ಫುರಿತ ಡಿಂಡಿಮ ಕಾಹಳೆಗಳ
ಭ್ಭರದಿ ಕೈಚಪ್ಪಳೆಗಳಿಂ ಕುಣಿಕುಣಿದು ಸುಖಿಸುವರು ॥ ೪೬

ಮೌನಿಗಳು ಭೂಸ್ವರ್ಗಕನ್ಯಾ
ದಾನಿಗಳು ಸುಜನೋಪಕಾರ
ಜ್ಞಾನಿಗಳು ಸದ್ಧರ್ಮಸತ್ಯಯಶೋನಿಧಾನಿಗಳು ।
ಹೀನಗುಣರಹಿತರು ಪರಸ್ತ್ರೀ
ಧ್ಯಾನವರ್ಜಿತರಖಿಳಜೀವದ
ಯಾನುಕೂಲರು ಬ್ರಹ್ಮನಿಷ್ಠರು ನಲಿವರೆಲ್ಲೆಡೆಯಾ ॥ ೪೭

ಪರಧನಕೆ ಪರರಿತ್ತದಾನಕೆ
ಕರುಬದರು ಪರಹಿಂಸೆಗಂಗೀ
ಕರಿಸದರು ಸಂತಾನಸಪ್ತಕರತಿಥಿಪೂಜಕರೂ ।
ನಿರತದೇವಾರ್ಚಕರು ಯತಿಗಳು
ಹರಿಯದಿನದುಪವಾಸಿಗಳು ಬಂ
ದೆರಗುತಿಹರಂಬುಜದಳಾಕ್ಷಕನಂಘ್ರಿಪಂಕಜಕೆ ॥ ೪೮

ಮೊದದಿ ಸಾಲೋಕ್ಯದಲಿ ಸಾಮೀ
ಪ್ಯದಲಿ ಸಾರೂಪ್ಯದಲಿ ಸಾಯು
ಜ್ಯದಲಿ ಸುಖಸಂಪ್ರಾಪ್ತರಾಗಿಹ ಭಕ್ತಕೋಟಿಗಳು ।
ಪದುಮನಾಭನನಂತಕೀರ್ತಿಯ
ಹೃದಯಕಮಲಾಂತರದೊಳಿಟ್ಟು
ಭ್ಯುದಯಪೂರ್ಣಾನಂದನಿತ್ಯತೆಯಿಂ ವಿರಾಜಿಪರು ॥ ೪೯

ಶಿವನೊಳಾಲೋಚಿಸುತ ಕಮಲೋ
ದ್ಭವನಿಗುಸುರುತ ಪಾರುಪತ್ಯವ
ದಿವಿಜವಲ್ಲಭಗಸುರಹರಣದ ರಾಜಕಾರಿಯವ ।
ವಿವರಿಸುತ ಗೀಷ್ಪತಿಸು ಧರ್ಮ
ಶ್ರವಣವಾಕರ್ಣಿಸುತ ಸಿರಿಮಾ
ಧವನು ಲೀಲಾರಾಜಯೋಗದ ತೋರ್ಪನರ್ಥಿಯಲಿ ॥ ೫೦

ಸಿರಿಧರಾದೇವಿಯರು ಪರಿಮಳ
ವೆರೆದ ಪೂಗೀಫಲದ ಪೋಳ್ಗಳ
ಕಿರುದರದ ಬೆಳುನಾಗವಲ್ಲಿಯ ದಳದ ಮಡಿಪುಗಳ ।

ಸರಸವಾಡುತಲೀಯುಲಂಗೀ
ಕರಿಸುತಮುರತಪೋಧನನ ಸು
ಸ್ವರದವೀಣಾರಕ್ತಿಗಾನಂದಿಸುತ ಹರಿ ಮೆರೆದ ॥ ೫೧

ಇಂತು ಪ್ರತಿದಿವಸದಲಿ ಲಕ್ಷ್ಮೀ
ಕಾಂತನೋಲಗಗೊಡುತ ಗಣಿಸುವೊ
ಡಂತದೋರದ ಜಂತುಗಳ ಸರ್ವಾಧಿಕಾರವನು ।
ಅಂತು ಜನನಸ್ಥಿತಿಲಯುಂಗಳ
ನಂತರವನರಿದೊದಗಿಸುತ ನಿ
ಶ್ಚಿಂತೆಯಿಂದಿರುತಿಹನು ಪೂರ್ಣಾನಂದವಿಭವದಲಿ ॥ ೫೨

ಒಂದುದಿನವೇಕಾಂತಭವನದೊ
ಳಿಂದಿರಾಸಮ್ಮೇಳದಲಿ ಗೋ
ವಿಂದನಾನಂದಿಸುತಲಿರಲರಮನೆಯ ಬಾಗಿಲಿಗೆ ।
ಬಂದರಾಸಮಯದಲಿ ಸನಕಸ
ನಂದನರು ಜಯವಿಜಯರವದಿರ
ನಿಂದಿರಿಸಲಸುರಾನ್ವಯದೊಳುದಯಿಸಲು ಶಪಿಸಿದರು ॥ ೫೩

ಇವರವರಕಲಹವನು ಸಿರಿಮಾ
ಧವನು ಕೇಳ್ದುತಂದು ಮುನಿಪುಂ
ಗವರ ಮನ್ನಿಸಿಕಳುಹಲಾ ಜಯವಿಜಯರತಿಭಯದಿ ।
ವಿವರದಿಂ ತಮಗಾದ ಶಾಪದ
ಬವಣೆಯಂ ಬಿನ್ನೈಸಿ ರಾಕ್ಷಸ
ಭವವನೆಂತನುಭವಿಪೆವೆನುತಡಿಗೆರಗಿಮರುಗಿದರು ॥ ೫೪

ನಳಿನಲೋಚನ ನಿಮ್ಮಪಾದಂ
ಗಳನಿರೀಕ್ಷಿಸದೊಂದುನಿಮಿಷವ
ಕಳೆಯಲಾಪೆವೆ? ಭಕುತರಿಗೆಭವವುಂಟೆ? ಯೆಂದೆನಲು ।
ಎಲೆಕುಮಾರರೆ! ಕೇಳಿರೈ ಮುನಿ
ಗಳ ಮಹೋಗ್ರದ ಶಾಪ ತಪ್ಪದು
ಘಳಿಯುಲೇಕಿದಕೆನುತ ಪರಿಹಾರವನು ಪೇಳಿದನು ॥ ೫೫

ಮೂರುಜನ್ಮದ ಪಗೆಯೊಳಮ್ಮನು
ಸೇರುವಿರೊ ಮೇಣಲ್ಲದೊಡೆ ಯೆಂ
ದಾರುಜನ್ಮದ ಮೈತ್ರಿಯಲಿ ಸಾರುವಿರೊಯೆಂದೆನಲು ।
ದೂರನೋಡಲು ಬೇಡ ವೈರದಿ
ಮೂರುಜನ್ಮಕೆ ಸಾರ್ವೆವಿದಕಿ
ನ್ನಾರುಹೊಣೆಯೆಂದೆನಲು ಹರಿ ಕರುಣದಿನಿರೂಪಿಸಿದ ॥ ೫೬

ಬಂದುಜನ್ಮವ ಭೂಘಣೀಂದ್ರರು
ಬಂದುಪರಿಹರಿಸುವರು ದಿಟವೀ
ಇಂದಿರಾಸತಿ ಯೆರಡನೆಯಜನ್ಮವನು ಮಾಣಿಪಳು ।
ಹೊಂದಿದಾ ಮೂರನೆಯಜನ್ಮವ
ಕೊಂದುಬಹುದೀಚಕ್ರಮೆದರಿಂ
ಮುಂದೆನಮ್ಮಡೆಗೆಯ್ದುವಿರಿಪೋಗೆಂದು ಕಳುಹಿಸಿದ ॥ ೫೭

ಬಳಿಕಲಾ ಜಯವಿಜಯರಂತಃ
ಕಲಿತಮಃಖದೊಳಮಲಮ್ಯಮಪದ
ನಳಿನಕಾನತರಾಗಿ ಚಿಂತೆಯಕುಳದ ಮುಗುಡದಲಿ ।
ಉಳಿದು ತಮ್ಮಶರೀರಗಳ ಕಳ
ಕಳಿಕೆಯಿಂ ಸಹದೇವಪುರವರ
ನಿಳಯನಂ ಧ್ಯಾಸಿಸುತಲೈತಂದರು ಮಹೀತಳಕೆ ॥ ೫೮

ಮೂರನೆಯ ಸಂಧಿ ಸಂಪೂರ್ಣ